


# ಮಹಾಮನೆ

ಕನ್ನಡ ಮಾಸಿಕ ಪತ್ರಿಕೆ



ಸಂಪುಟ : ೨೪
ಸಂಚಿಕೆ : ೦೩
ಅಕ್ಟೋಬರ್ : ೨೦೨೧
ರೂ. ೧೫/-

## ಕ್ಷೇತ್ರ ವಾರ್ತೆಗಳು



**ದೇಸಾಯಿಗೌಡ ಮತ್ತು ಮಡಿವಾಳಪ್ಪಗೌಡ ಪೋಲೀಸ್ ಪಾಟೀಲ ದರ್ಶನಾಪುರ ದತ್ತಿ**

ಶಹಾಪುರ: ದಿನಾಂಕ: ೧೧.೯.೨೦೨೧ ಪೂಜ್ಯ ಶ್ರೀ ರುದ್ರಪಶುಪತಿ ಸ್ವಾಮಿಗಳು, ಡಾ. ಗೊ.ರು. ಚನ್ನಬಸಪ್ಪ, ಚಂದ್ರಶೇಖರ ಅರಬೋಳ, ಸಿದ್ದಪ್ಪ ಎಸ್. ಹೊಟ್ಟಿ, ಎಸ್.ಬಿ. ಅಂಗಡಿ, ಬಾಪುಗೌಡ ಪಾಟೀಲ, ಡಾ. ದಯಾನಂದ ಅಗಸರ



ಶಹಾಪುರದಲ್ಲಿ ನಡೆದ ದತ್ತಿ ಕಾರ್ಯಕ್ರಮ



**ಮೈಸೂರು ಗ್ರಾಮಾಂತರ ಜಿಲ್ಲೆ: ಸಂಸ್ಥಾಪಕರ ದಿನಾಚರಣೆ**
ದಿನಾಂಕ: ೨೯.೮.೨೦೨೧
ವೇದಿಕೆಯಲ್ಲಿ:
ಹೆಳವರಹುಂಡಿ ಸಿದ್ದಪ್ಪ
ಪೂಜ್ಯ ಶ್ರೀ ಚಿದಾನಂದ ಮಹಾಸ್ವಾಮಿಗಳು



# ಮಹಾಮನೆ

ಅಕ್ಟೋಬರ್ - ೨೦೨೧ ಸಂಪುಟ : ೨೪ ಸಂಚಿಕೆ : ೦೩



ಪ್ರಕಾಶಕರು
ಗೊ.ರು. ಚನ್ನಬಸಪ್ಪ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ
ಜಯನಗರ ೮ನೆಯ ವಿಭಾಗ
ಬೆಂಗಳೂರು - ೫೬೦ ೦೭೦
ದೂ: ೦೮೦ - ೨೨೯೭ ೦೧೨೫
E-mail:
mahamanemagazine@gmail.com

**ಸಂಚಿಕೆಯ ಅಂತರಂಗ**

ಬಿನ್ನಹ ...... 

# ಆತ್ಮಶೋಧನೆಯ ತುರ್ತಿನ ಕಾಲ

ಗಾಂಧಿ ಮತ್ತು ಅಂಬೇಡ್ಕರ್ ಎನ್ನುವ ಎರಡು ನಿರ್ಣಾಯಕ ವ್ಯಕ್ತಿತ್ವಗಳನ್ನು ನೆನೆದಾಗಲೆಲ್ಲ ಶರಣ ಕ್ರಾಂತಿಯೂ ಪಕ್ಕದಲ್ಲಿ ಬಂದು ನಿಲ್ಲುವುದು ಸಹಜ. ಎಲ್ಲ ಘನವ್ಯಕ್ತಿತ್ವಗಳೂ, ಕ್ರಾಂತಿಗಳೂ ಅನಾದಿ ಕಾಲದಿಂದಲೂ ಉದ್ದೇಶಿಸಿರುವುದು ಮಾನವ ಕಲ್ಯಾಣವನ್ನೇ. ಇದನ್ನು ಸಾಧಿಸಲು ಅವರು ಬಳಸಿದ ಪರಿಕರಗಳಲ್ಲಿ ತುಸು ವ್ಯತ್ಯಾಸವಿರಬಹುದಾದರೂ ದಾರಿ ಮತ್ತು ಗುರಿ ಒಂದೇ ಎನ್ನುವುದರಲ್ಲಿ ಅನುಮಾನಗಳಿಲ್ಲ. ಹೀಗಾಗಿ ಆ ಎಲ್ಲ ಚೇತನಗಳ ನಡುವೆ ಪರಸ್ಪರ ಸಂವಾದವೊಂದು ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಬಸವಣ್ಣ, ಗಾಂಧಿ ಮತ್ತು ಅಂಬೇಡ್ಕರ್ ಈ ಮೂವರೂ ಒಂದೆಡೆ ಕಲೆತು ಮಾತನಾಡುತ್ತಿದ್ದಾರೆ ಎನ್ನುವುದಾದರೆ, ಆ ಮಾತುಕಥೆಗಳು ಹೇಗಿರಬಹುದು? ತಾವು ಆರಿಸಿಕೊಂಡ ಪರಿಕರಗಳನ್ನು ಅವರು ಮುಕ್ತವಾಗಿ ಶೋಧನೆಗೆ ಒಡ್ಡುತ್ತಾರೆ ಎನಿಸುತ್ತದೆ. ಅಹಿಂಸೆ ಮತ್ತು ಸತ್ಯಾಗ್ರಹಗಳ ಮೂಲಕ ಎಲ್ಲ ಬಗೆಯ ಶೋಷಣೆ ಮತ್ತು ಬಂಧನಗಳಿಂದ ಬಿಡುಗಡೆ ಪಡೆಯಬಹುದು ಎನ್ನುವುದನ್ನು ಪ್ರಾಯೋಗಿಕವಾಗಿ ಸಾಧಿಸಲು ಗಾಂಧಿ ಜೀವಮಾನವಿಡೀ ಪ್ರಯತ್ನಪಟ್ಟರು.

ಅಂಬೇಡ್ಕರ್ ಇದನ್ನು ಶಿಕ್ಷಣ, ಪ್ರಭುತ್ವ ಮತ್ತು ಅರಿವುಗಳ ದಾರಿಯ ಮೂಲಕ ಮೀರಿಕೊಳ್ಳಬಹುದು ಎಂದು ಯೋಚಿಸಿದರು. ಬಸವಣ್ಣ ಆರಿಸಿಕೊಂಡದ್ದು, ಕಾಯಕದ ಪರಿಕರವನ್ನು. ಲೀಲೆಯಲ್ಲಿ ಯಾವುದು ವಿಫಲವಲ್ಲ ಎನ್ನುವ ಆತ್ಮಘನತೆಯಲ್ಲಿ ಎಲ್ಲ ಕಾಯಕಗಳನ್ನು ಸಮಾನವೇದಿಕೆಗೆ ತರುವ ಮೂಲಕ ಎಲ್ಲ ಬಗೆಯ ತರತಮಗಳನ್ನು ಗೆಲ್ಲಲು ಸಾಧ್ಯ ಎನ್ನುವ ನಂಬಿಕೆ ಬಸವಣ್ಣನವರದ್ದಾಗಿತ್ತು. ಆ ಮೂವರ ಕಲ್ಪಿತ ಮಾತುಕತೆಯಲ್ಲಿ ನಮ್ಮ ಪರಿಕರಗಳು ಸರಿಯಾಗಿಯೇ ಇದ್ದವಲ್ಲ, ಆದರೆ ಯಾಕಾಗಿ ನಿರೀಕ್ಷಿತ ಯಶಸ್ಸು ಸಿಗಲಿಲ್ಲ ಎನ್ನುವ ಪ್ರಶ್ನೆ ಈ ಮೂವರನ್ನೂ ಕಾಡಿಯೇ ಕಾಡುತ್ತದೆ. ಮಾನವ ಜನಾಂಗದ ಸಂಕಷ್ಟಗಳನ್ನು ತೀರಿಸಲು ಎಂದಿಗಾದರೂ ಸಾಧ್ಯವೇ? ಎನ್ನುವ ಉತ್ತರವಿಲ್ಲದ ಪ್ರಶ್ನೆಯಲ್ಲಿ ಈ ಮಾತುಕಥೆ ಮುಗಿಯಬಹುದೋ ಏನೋ?

ಈ ಎಲ್ಲವೂ ಕಲುಷಿತ ಮಾನವ ಜನಾಂಗವನ್ನು ಸ್ವಚ್ಛಗೊಳಿಸಬಲ್ಲಂತಹ ಪರಿಕರಗಳೇ ಆಗಿವೆ. ಮತ್ತು ಈ ಮೂವರೂ ಕೇವಲ ಪ್ರವಾಚಕರಲ್ಲ. ನಡೆ ಮತ್ತು ನುಡಿಯ ಅಭಿನ್ನತೆಯನ್ನು ಸಾಧಿಸಿದರೆ ಮಾತ್ರ ಇತರರಿಗೆ ಹೇಳಬಲ್ಲ ನೈತಿಕತೆ ತನಗಿರುತ್ತದೆ ಎನ್ನುವ ಎಚ್ಚರವನ್ನು ನಿದ್ದೆ – ಎಚ್ಚರಗಳಲ್ಲೂ ಕಾಪಿಟ್ಟುಕೊಂಡವರು. ಸಮಕಾಲೀನ ಸನ್ನಿವೇಶದಲ್ಲಿ ಆರು ಹಿತವರು ನಿನಗೆ ಈ ಮೂವರೊಳಗೆ? ಎನ್ನುವ ಸವಾಲು ಎದುರಾದದ್ದಾದರೆ, ಮೂವರೂ ನಮಗೆ ಬೇಕು. ಕಾಯಕ, ಅಹಿಂಸೆ, ಸತ್ಯಾಗ್ರಹ, ಶಿಕ್ಷಣ, ಕೀಳರಿಮೆಯಿಲ್ಲದ ಆತ್ಮಘನತೆ ಈ ಎಲ್ಲವನ್ನೂ ಮಾನವ ಜನಾಂಗವು ಒಳಗೊಳ್ಳಲೇಬೇಕು. ಇವುಗಳನ್ನು ಕುರಿತ ಪ್ರಯತ್ನಗಳೂ ನಡೆಯುತ್ತಲೇ ಇವೆ. ಹೀಗಿದ್ದೂ, ಎರಡು ಹೆಜ್ಜೆ ಮುಂದೆ ಹೋದರೆ ನಾಲ್ಕು ಹೆಜ್ಜೆ ಹಿಂದೆ ಸರಿದ ಅನುಭವವಾಗುತ್ತದೆ. ಎಂದರೆ, ಇದು ಆತ್ಮಶೋಧನೆಯ ತುರ್ತಿನ ಕಾಲ.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿ ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟದ ಕಲಾವಿದ ಶ್ರೀ ಮುರಳೀಧರ ವಿ. ರಾಠೋಡ ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಎಂ.ಎಸ್. ಆಶಾದೇವಿ**



ಅಧ್ಯಕ್ಷರ ನುಡಿ

# ಗಾಂಧಿ ಜಯಂತಿ

ಇದೇ ಅಕ್ಟೋಬರ್ ೨, ಗಾಂಧಿ ಜಯಂತಿ. ಇದು ಉಳಿದ ಧಾರ್ಮಿಕ ಸಂಬಂಧದ ಆಚರಣೆಯಂತಲ್ಲ; ಇದು ರಾಷ್ಟ್ರೀಯ ಸಂಬಂಧದ ಆಚರಣೆ. ಯಾವುದೇ ಜಾತಿ–ಮತ, ಪಂಥ–ಪಕ್ಷ–ಪ್ರದೇಶಗಳ ಭೇದವಿಲ್ಲದೆ ಪ್ರತಿಯೊಬ್ಬ ಭಾರತೀಯನೂ ಪಾಲುಗೊಳ್ಳುವ ಒಂದು ಸಾರ್ವತ್ರಿಕ ಆಚರಣೆ.

ಇಂತಹ ಜಯಂತಿಗಳ ಆಚರಣೆಯ ಆಶಯ – ನಾವು ಯಾರ ಜಯಂತಿಯನ್ನು ಆಚರಿಸುತ್ತೇವೆಯೋ ಆ ವ್ಯಕ್ತಿಯ ಜೀವನ ಸಂದೇಶವನ್ನು ಮತ್ತೆ ಮತ್ತೆ ಸ್ಮರಿಸಲಿಕ್ಕಾಗಿ; ಅವರ ಆದರ್ಶವನ್ನು ಪರಿಪಾಲಿಸಲಿಕ್ಕಾಗಿ. ಆದರೆ, ವಾಸ್ತವವಾಗಿ ಕಾಲ ಕಳೆದಂತೆಲ್ಲ ಬಹುತೇಕ ಜಯಂತಿ ಆಚರಣೆಗಳು ತಮ್ಮ ಅರ್ಥವನ್ನು ಕಳೆದುಕೊಂಡು, ಕೇವಲ ಉಪಚಾರದ ರೂಪ ತಳೆದಂತೆ ಕಾಣುತ್ತದೆ. ಇದು ನಿಜಕ್ಕೂ ಒಂದು ವಿಪರ್ಯಾಸ; ವಿಷಾದ.

ಇಂದಿನ ಗಾಂಧಿ ಜಯಂತಿ ಎಂದರೆ, ಗಾಂಧೀಜಿ ಅವರ ಬಗೆಗೆ ನಿಜವಾದ ನಿಷ್ಠೆ ಇರುವವರನ್ನು ಬಿಟ್ಟರೆ, ಉಳಿದ ಯಾರಿಗೂ ಈ ಆಚರಣೆಯಲ್ಲಿ ಇರಬೇಕಾದ ಶ್ರದ್ಧಾಸಕ್ತಿ ಕಂಡುಬರುತ್ತಿಲ್ಲ. ಇದು ಸರ್ಕಾರದ ಕಾರ್ಯಕ್ರಮವೆಂಬ ಕಾರಣದಿಂದ ಸರ್ಕಾರಿ ಕಛೇರಿಗಳಲ್ಲಿ, ಶಾಲಾ–ಕಾಲೇಜುಗಳಲ್ಲಿ ನಡೆಸುವ ಒಂದು 'ಶಾಸ್ತ್ರ ಸಂಕೇತ'ವಾಗಿದೆ. ಇನ್ನು ಸಾರ್ವಜನಿಕ ಸಂದರ್ಭಗಳಲ್ಲಿ, ಕೆಲವು ರಾಜಕೀಯ ಪಕ್ಷಗಳು ಗಾಂಧೀಜಿ ಅವರ ಆಶಯಗಳ ಬಗೆಗೆ ಚಿಂತನೆ ನಡೆಸುವುದನ್ನು ಬಿಟ್ಟು, ಈ ಸಂದರ್ಭವನ್ನು ತಮ್ಮ ಪಕ್ಷ ಚಟುವಟಿಕೆಗಳಿಗೆ ಬಳಸಿಕೊಳ್ಳುವ ಸ್ಥಿತಿಯನ್ನು ಕಾಣುತ್ತೇವೆ. ಅವರ ಉದ್ದೇಶವೆಲ್ಲ ಪ್ರದರ್ಶನ ಮತ್ತು ಪ್ರಚಾರ.

ಗಾಂಧೀಜಿ ಅವರೇನೂ ತಮ್ಮ ಜಯಂತಿ ಆಚರಿಸಲು ನಮಗೆ ಹೇಳಿ ಹೋಗಿಲ್ಲ. ಅದು ಅವರ ಶ್ರೇಷ್ಠ ಜೀವನದ ಸ್ಮರಣೆಗಾಗಿ ನಾವೇ ಯೋಜಿಸಿಕೊಂಡದ್ದು. ಆದರೆ, ಆರಂಭದ ಆಶಯವೇ ಮರೆಯಾದಂತಿದೆ. ಗಾಂಧೀಜಯಂತಿ ರಜೆ ಅನುಭವಿಸಲಿಕ್ಕಲ್ಲ; ಅವರ ಭಾವಚಿತ್ರವನ್ನಿಟ್ಟು ಪೂಜಿಸಲಿಕ್ಕಲ್ಲ; ಅವರನ್ನು ಕುರಿತು ಉದ್ದುದ್ದ ಭಾಷಣ ಮಾಡಲಿಕ್ಕಲ್ಲ; ಅವರ ಹೆಸರು ಹಿಡಿದು ಜೈಕಾರ ಹಾಕುವುದಕ್ಕಲ್ಲ. ಈ ಸಂದರ್ಭದಲ್ಲಿ ಗಾಂಧೀಜಿ ಅವರ ವಿಚಾರಧಾರೆಯ ಬಗೆಗೆ ಗಂಭೀರ ಚಿಂತನೆ ನಡೆಸಿ, ಅದನ್ನು ನಮ್ಮ ವೈಯಕ್ತಿಕ ನಡೆ–ನುಡಿಗಳಲ್ಲಿ ಮತ್ತು ಸಾರ್ವಜನಿಕ ಜೀವನದಲ್ಲಿ ಅನುಷ್ಠಾನಗೊಳಿಸಲಿಕ್ಕೆ.

ನಾವು ಬರೀ ಅಬ್ಬರದಲ್ಲಿದ್ದೇವೆ. ಹನ್ನೆರಡನೆಯ ಶತಮಾನದ ಶರಣ ಘಟ್ಟಿವಾಳಯ್ಯನ ಒಂದು ಮಾತಿದೆ: 'ಇವರಿಬ್ಬರ ಕಲಹದ ನಡುವೆ ಅಬ್ಬರವಾದಡೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ". ಹಾಗೆ ನಾವೂ ಪರಸ್ಪರ ವಾದ–ವಿವಾದ, ಪ್ರತಿಷ್ಠೆ–ಪ್ರಚಾರ, ಗದ್ದಲ–ಗೊಂದಲಗಳಲ್ಲೇ ಇದ್ದರೆ ಗಾಂಧೀಜಿ ವಿಚಾರಕ್ಕೆ ಅವಕಾಶದಲ್ಲಿ ಸಿಕ್ಕೀತು?

"ಸ್ವಾತಂತ್ರ್ಯದ ಅತ್ಯುನ್ನತ ರೂಪ ನಮ್ಮೊಡನೆ ಅತ್ಯಂತ ದೊಡ್ಡ ಪ್ರಮಾಣದ ಶಿಸ್ತು ಮತ್ತು ವಿನಮ್ರತೆಗಳನ್ನು ತರಬೇಕು" ಎಂದಿದ್ದಾರೆ, ಗಾಂಧೀಜಿ. ಸ್ವತಂತ್ರರೆನ್ನುವ ನಾವು ಆ

ಶಿಸ್ತನ್ನು ಪಾಲಿಸುತ್ತಿದ್ದೇವೆಯೆ? ಆ ವಿನಮ್ರತೆಯನ್ನು ರೂಢಿಸಿಕೊಂಡಿದ್ದೇವೆಯೆ? ನಾವು ಆತ್ಮನಿರೀಕ್ಷೆ ಮಾಡಿಕೊಳ್ಳಬೇಕು. ಪ್ರಜಾಪ್ರಭುತ್ವದ ಪ್ರಣಾಳಿಕೆಯೆಂದರೆ, ಶಿಸ್ತು ಮತ್ತು ಹೊಣೆಗಾರಿಕೆ. ಆದರೆ, ಇಂದಿನ ಭಾರತದಲ್ಲಿ ಅವೆರಡಕ್ಕೂ ಕುಷ್ಠರೋಗ ತಗಲಿದೆ ಎಂಬುದಕ್ಕೆ. ನಮ್ಮ ಸುತ್ತಮುತ್ತ ಇಂದು ನಾವು ಕಂಡುಕೇಳುತ್ತಿರುವ ವಿದ್ಯಮಾನಗಳೇ ಸಾಕ್ಷಿಯಾಗಿವೆ. ನವಭಾರತವನ್ನು ಕಟ್ಟಬೇಕೆನ್ನುವವರು ನೆನಪಿನಲ್ಲಿಟ್ಟುಕೊಳ್ಳಬೇಕಾದ, ಗಾಂಧೀಜಿ ಅವರ ಮತ್ತೊಂದು ಮಾತೆಂದರೆ – "ಪ್ರಜಾಪ್ರಭುತ್ವದಲ್ಲಿ ಯಾರೂ ಮೇಲಲ್ಲ; ಯಾರೂ ಕೀಳಲ್ಲ. ದೇಹದ ಮೇಲಿದೆ ಎಂಬ ಕಾರಣಕ್ಕೆ ತಲೆ ಮೇಲಲ್ಲ; ದೇಹದ ಕೆಳಗಿವೆಯೆಂಬ ಕಾರಣಕ್ಕೆ ಕಾಲುಗಳು ಕೀಳಲ್ಲ. ಅವೆರಡೂ ದೇಹದ ಅವಿಭಾಜ್ಯ ಅಂಗಗಳು. ಅವೆರಡಕ್ಕೂ ಸಮಾನ ಸ್ಥಾನವಿದೆ. ಅಂತೇ ಸಮಾಜದ ಅಂಗವಾದ ಎಲ್ಲರೂ ಸಮಾನರು. ಅಲ್ಲಿ ಅಗ್ರಜ–ಅಂತ್ಯಜಗಳಿಗೆ ಅವಕಾಶವಿಲ್ಲ. ಅದೇ ನಿಜವಾದ ಸಮಾಜವಾದ".

ಈ ಸಂದರ್ಭದಲ್ಲಿ, ಗಾಂಧೀಜಿಗೆ ಸಂಬಂಧಿಸಿದಂತೆ ನಮ್ಮ ನಾಡಿನ ಮೂವರು ಶ್ರೇಷ್ಠ ಕವಿಗಳ ನುಡಿಗಳನ್ನು ನಮ್ಮ 'ಮಹಾಮನೆ'ಯ ಓದುಗರ ಮುಂದಿಡುತ್ತಿದ್ದೇನೆ. ಆ ಕವಿನುಡಿಗಳನ್ನು ಮತ್ತೆ ವಿವರಿಸುವ ಅಗತ್ಯವಿದೆ ಎಂದು ನಾನು ಭಾವಿಸಿಲ್ಲ. ಅವು ಗಾಂಧೀಜಿ ಬಗೆಗೆ ಹೇಳಬೇಕಾದುದೆಲ್ಲವನ್ನೂ ಹೇಳುತ್ತವೆ. ನಾನು ಕೇವಲ ಅವುಗಳನ್ನು ಇಲ್ಲಿ ಉಲ್ಲೇಖಿಸಿದ್ದೇನೆ:

ರಾಷ್ಟ್ರಕವಿ ಕುವೆಂಪು: "ರಾಷ್ಟ್ರಪಿತ ದಿವಂಗತ, ಉನ್ಮತ್ತ ಹಸ್ತಹತ. ನರಹೃದಯದ ವಿಷವಾರ್ಧಿಗೆ ಜೀವಾಮೃತ ಸಮರ್ಪಿತ. ಕ್ಷಮಿಸು, ಓ ಜಗತ್ಪಿತ, ಅದೃಷ್ಟಹೀನ ಭಾರತ!"

ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ: 'ಬಾಪೂಜಿ, ನೀವು ಇಲ್ಲಿಗೆ ಬಂದು ಹೋದಮೇಲೆ, ಇಲ್ಲಿ ಏನಾಗಿದೆಯೆಂದು ಕೇಳಬೇಡಿ. ನಿಮ್ಮೆದೆಗೆ ತಾಗಿದ ಗುಂಡು ನಮ್ಮೆದೆಗೂ ತಾಗಿದ್ದರೆ ಆ ಮಾತು ಬೇರೆ".

ಹಿರಿಯ ಕವಿ ಸಿ.ಪಿ.ಕೆ.: "ಗಾಂಧೀ ಜಯಂತಿಯಂದು ಮಾಂಸ ತಿನ್ನಬಹುದೇ ಎಂದು ಮನಸ್ಸೊಮ್ಮೆ ಕೇಳಿತು. ನಂತರ ಮನಸ್ಸೇ ಹೇಳಿತು. ಅಯ್ಯೋ ಹುಚ್ಚ, ಗಾಂಧಿಯನ್ನೇ ಕೊಂದಿದ್ದೇವೆ; ಮಾಂಸದಲ್ಲೇನಿದೆ?"

ಈ ಮೂರೂ ಕವಿಗಳ ವಾಣಿಗಳ ಹಿಂದಿರುವ ನೋವು, ಸಂವೇದನಾ ಶಕ್ತಿ ಇರುವವರನ್ನು ಚಿಂತನೆಗೆ ಹಚ್ಚಿದರೆ, ಅಭಿನಯದ ಆಚರಣೆಯ 'ಗಾಂಧಿಭಕ್ತ'ರ ನಗ್ನತೆಯನ್ನು ತೋರಿಸುತ್ತವೆ.

ಗಾಂಧೀಜಿ ಸ್ವತಂತ್ರ ಭಾರತದಲ್ಲಿ ಯಾವ ಯಾವ ಅನಿಷ್ಟಗಳು ಇರಬಾರದೆಂದು ಹೇಳಿದ್ದರೋ, ಆ ಅನಿಷ್ಟಗಳೆಲ್ಲ ನೂರ್ಮಡಿಯಾಗಿ, ಇಂದಿನ 'ಕೋವಿಡ್'ಗಿಂತ ಕ್ರೂರವಾಗಿ ನಮ್ಮನ್ನು ಕಾಡುತ್ತಿವೆ. ಇಂದಿನ ಅವಸರದ ಅಗತ್ಯವೆಂದರೆ, ಆ ಅನಿಷ್ಟಗಳ ನಿವಾರಣೆ. ಆ ದಿಸೆಯಲ್ಲಿ ಸಂಕಲ್ಪಮಾಡಿ ದಿಟ್ಟ ಹೆಜ್ಜೆ ಇಟ್ಟರೆ ಮಾತ್ರ, ಗಾಂಧಿಜಯಂತಿ ಆಚರಣೆಗೆ ಅರ್ಥಬರುತ್ತದೆ; ಇಲ್ಲವಾದರೆ ವ್ಯರ್ಥವೆನಿಸುತ್ತದೆ!

**– ಗೊ.ರು. ಚನ್ನಬಸಪ್ಪ**



# ಚೆನ್ನಬಸವಣ್ಣನವರ ವಚನ–ನಿರ್ವಚನ

**ಪ್ರೇಮಕ್ಕ ಹೊರಟ್ಟಿ**
*ಗುರುಕೃಪ, ಹೊಸಯಲ್ಲಾಪುರ ರಸ್ತೆ*
*ಧಾರವಾಡ – ೫೮೦ ೦೦೧*
*೯೪೮೧೪ ೪೮೭೦೩*

**ಒಕ್ಕುದ ಪ್ರಸಾದವೆಂದಿಕ್ಕುವಾತನನಾಚಾರಿ**
**ಕೊಂಬುವಾತ ನೆಟ್ಟನೆ ವ್ರತಗೇಡಿ**
**ಪ್ರಸಾದವೆಂಬುದು ಹೆಸರಿಲ್ಲದ ಘನವು**
**ಪ್ರಸಾದಿಯಾದಾತ ಶೂನ್ಯ ಶರಣ, ಇರವೇ**
**ಲಿಂಗೈಕ್ಯ, ಪರವೇ ಪ್ರಸಾದ। ಇದು ಕಾರಣ**
**ಕೂಡಲಚೆನ್ನಸಂಗಯ್ಯನಲ್ಲಿ ಗುರುವೆಂಬ**
**ಓಗರಕ್ಕೆ ಶಿಷ್ಯನೆಂಬ ಪ್ರಸಾದ.**

**– ಚೆನ್ನಬಸವಣ್ಣ**

ಶರಣಸಿದ್ಧಾಂತದಲ್ಲಿ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳು ಮೂಲ ಆಧಾರಸ್ತಂಭಗಳು. ಅದರಲ್ಲಿ ಷಟ್‌ಸ್ಥಲ ಎಂದರೆ ಆರು ಸ್ಥಲಗಳು, ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ. ಮೂರನೇಯದು ಪ್ರಸಾಧಿ ಸ್ಥಲ. ಮೇಲಿನ ವಚನದಲ್ಲಿ ನಿಜವಾದ 'ಪ್ರಸಾದ' ಎಂದರೆ ಏನು, ನಿಜವಾದ 'ಗುರು' ಮತ್ತು 'ಶಿಷ್ಯ' ಯಾರು ಎಂಬುದನ್ನು ತಿಳಿಸಿಕೊಟ್ಟಿದ್ದಾರೆ.

**ಒಕ್ಕುದ ಪ್ರಸಾದವೆಂದಿಕ್ಕುವಾತನನಾಚಾರಿ**

ಒಕ್ಕುದ ಎಂದರೆ ನಾವು ಊಟ ಮಾಡುವ ಆಹಾರ, ಭೋಗಿಸುವ ಅನ್ನವನ್ನು, ಅದನ್ನೆ ಪರಬ್ರಹ್ಮಸ್ವರೂಪ, ಲಿಂಗಸ್ವರೂಪ ಪ್ರಸಾದ ಎಂದು ತಿಳಿದು ನೀಡುವಾತ ಅನಾಚಾರಿ.

**ಕೊಂಬುವಾತ ನೆಟ್ಟನೆ ವ್ರತಗೇಡಿ**

ನಾವು ಊಟ ಮಾಡುವ, ಭೋಗಿಸುವ ಅನ್ನವನ್ನೆ ಪರಬ್ರಹ್ಮ ಸ್ವರೂಪ, ಲಿಂಗಸ್ವರೂಪ ಪ್ರಸಾದ ಎಂದು ಕೊಂಬುವಾತ, ಸ್ವೀಕರಿಸುವಾತ ನೆಟ್ಟನೇ ವ್ರತಗೇಡಿ ಅಂದರೆ ಅಜ್ಞಾನಿ, ವ್ರತ ಆಚಾರವನ್ನು ತತ್ವವನ್ನು ತಿಳಿದವನಲ್ಲ.

ಏಕೆಂದರೆ, ಶರಣ ಸಾಹಿತ್ಯದಲ್ಲಿ ನಾವು ನಿತ್ಯ ಸೇವಿಸುವ, ಮಾಡುವ ಊಟಕ್ಕೆ, ಅನ್ನಕ್ಕೆ ಪ್ರಸಾದ ಎಂದು ಕರೆದಿಲ್ಲ. ಅದನ್ನು ಗೌರವದಿಂದ ಪ್ರಸಾದ ಎಂದು ಕರೆದಿದ್ದಾರೆಯೇ

ಹೊರತು ನಿಜವಾಗಿ ಪ್ರಸಾದಕ್ಕೆ ಅರ್ಥ ಅನ್ನ ಅಲ್ಲ. ಯಾವುದು ನಿಜವಾದ ಪ್ರಸಾದ ಎಂದು ಮುಂದೆ ಹೇಳುತ್ತಾರೆ.

**ಪ್ರಸಾದವೆಂಬುದು ಹೆಸರಿಲ್ಲದ ಘನವು**

ಪ್ರಸಾದವೆಂಬುದು ಹೆಸರಿಲ್ಲದ ಘನವು ಎಂದರೆ, ಯಾವುದಕ್ಕೆ ನಾಮ, ರೂಪ, ಜಾತಿ, ಕುಲ, ದೇಶ, ಕಾಲ, ಉಪಾಧಿ ಇಲ್ಲವೋ, ಯಾವುದು ಸತ್ತು ಚಿತ್ತು ಆನಂದಸ್ವರೂಪವೋ ಅಂತಹ ನಿತ್ಯ, ಪರಿಪೂರ್ಣ ಘನವಾದ ವಸ್ತುವಿಗೆ ಘನವು ಎಂದು ಶರಣರು ಕರೆದಿದ್ದಾರೆಯೇ ಹೊರತು, ನಾವು ಊಟ ಮಾಡುವ ಅನ್ನಕ್ಕೆ ಪ್ರಸಾದ ಎಂದು ಕರೆದಿಲ್ಲ. ಆದುದರಿಂದ ಆ ಸತ್‌ಚಿತ್ ಆನಂದ, ಪರಬ್ರಹ್ಮ ಸ್ವರೂಪ ವಸ್ತುವಿಗೆ ಘನವೆಂದು ಕರೆದಿದ್ದಾರೆ.

**ಪ್ರಸಾದಿಯಾದಾತ ಶೂನ್ಯ ಶರಣ, ಇರವೇ ಲಿಂಗೈಕ್ಯ, ಪರವೇ ಪ್ರಸಾದ**

ಇಂತಹ ನಿತ್ಯ, ಪರಿಪೂರ್ಣ ವಸ್ತುವನ್ನು ಪ್ರಸಾದವೆಂದು ಸ್ವೀಕರಿಸಿದಾತ ಪ್ರಸಾದಿ, ಅವನು ಶೂನ್ಯ ಶರಣ. ಮುಂದೆ ಅವನು ಶೂನ್ಯವಾಗಿರುವಂತ ಪರಬ್ರಹ್ಮ ಸ್ವರೂಪನೇ ಆಗಿಬಿಡುತ್ತಾನೆ. ಅಂತಹ ಪ್ರಸಾದಿ ಹೇಗಿರುತ್ತಾನೆ ಎಂದು ಮುಂದೆ ಹೇಳುತ್ತಾರೆ. ಆತನ ಇರವೇ, ಇರುವಿಕೆಯೇ ಲಿಂಗೈಕ್ಯ ಸ್ಥಿತಿ, ಆತನು ಲಿಂಗೈಕ್ಯ ಸ್ಥಿತಿಯಲ್ಲಿದ್ದಾನೆ, ಪರಬ್ರಹ್ಮ ಬೇರೆ ಅಲ್ಲ, ಶೂನ್ಯ ಶರಣ ಬೇರೆ ಅಲ್ಲ. ಅವನ ಸ್ವರೂಪವೇ ಲಿಂಗೈಕ್ಯ ಏಕೆಂದರೆ, ಪರವೇ ಪ್ರಸಾದ, ಪರಬ್ರಹ್ಮನೇ ಆಗಿರುವಂತ ಅವನು ಲಿಂಗೈಕ್ಯ. ಮುಂದೆ ಹೇಳುತ್ತಾರೆ.

**ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಗುರುವೆಂಬ ಓಗರಕ್ಕೆ ಶಿಷ್ಯನೆಂಬ ಪ್ರಸಾದ**

ಓಗರ ಎಂದರೆ ಅನ್ನ. ಇಂಥ ಗುರುವಿನ ಅರಿವಿನ ಸ್ವರೂಪದ ಜ್ಞಾನಾಮೃತ ಉಪದೇಶವನ್ನು ಓಗರವಾಗಿ, ಪ್ರಸಾದವಾಗಿ ಸ್ವೀಕರಿಸಿದನೆಂದರೆ ಅಂಥ ಶಿಷ್ಯನು ಪರಬ್ರಹ್ಮನೇ ಆಗಿಬಿಡುತ್ತಾನೆ.

ಅರಿವಿನ ಜ್ಞಾನಾಮೃತ ಉಪದೇಶ ನೀಡಿದ ಗುರುವೇ ಓಗರವಾಗಿ, ಇದನ್ನು ಸ್ವೀಕರಿಸಿದಾತ ಪ್ರಸಾದಿ ಎಂಬುದು ಇದರರ್ಥ. ಒಬ್ಬ ಶ್ರೇಷ್ಠ ಗುರುವಿನಿಂದ ಉಪದೇಶ ಪಡೆದ, ಅರಿವಿನ ಜ್ಞಾನವನ್ನು ಪಡೆದು, ಶಿಷ್ಯನು ಪರಮಪ್ರಸಾದಿ ರೂಪನೇ ಆದ, ಒಬ್ಬ ಪ್ರಸಾಧಿಯ ಸ್ಥಿತಿ ಇದು. ಅರ್ಥಪೂರ್ಣವಾದ ವಚನ ಇದಾಗಿದೆ. ಇದೇ ಅರ್ಥ ಬರುವ ಅಣ್ಣ ಬಸವಣ್ಣನವರ ಪ್ರಸಾದಿಸ್ಥಲದ ವಚನ ಹೀಗಿದೆ.

**ಮಿಥ್ಯವನಳಿದುಳಿದ ಸತ್ಯಪ್ರಸಾದಿ**
**ರಂಜನವಿಲ್ಲದ ನಿರಂಜನಪ್ರಸಾದಿ**
**ದುಃಖವಳಿದ ಘನಾನಂದ ಪ್ರಸಾದಿ**
**ಅನಿತ್ಯವಿಲ್ಲದ ನಿತ್ಯಪ್ರಸಾದಿ**
**ಖಂಡಿತವಿಲ್ಲದ ಅಖಂಡಿತಪ್ರಸಾದಿ**
**ಕೂಡಲಸಂಗಮದೇವರಲ್ಲಿ ತಾನೇ ಪ್ರಸಾದಿ.**

ಆತನ ಇರುವಿಕೆಯೇ ಲಿಂಗೈಕ್ಯ ಸ್ಥಿತಿ. ಇದು ಇಲ್ಲಿಯ ಭಾವ. ಶರಣ ಆದಯ್ಯನವರ ಈ ವಚನ ಪ್ರಸಾದದ ಅರ್ಥವನ್ನು ಅರ್ಥಪೂರ್ಣವಾಗಿ ತಿಳಿಸಿ ಹೇಳುತ್ತದೆ.



**ಪ್ರಸಾದವೇ ಪರಮ ಜ್ಞಾನ, ಪ್ರಸಾದವೇ ಪರಾಪರ**
**ಪ್ರಸಾದವೇ ಪರಬ್ರಹ್ಮ, ಪ್ರಸಾದವೇ ಪರಮಾನಂದ,**
**ಪ್ರಸಾದವೇ ಗುರು ಪ್ರಸಾದವೇ ಲಿಂಗ, ಪ್ರಸಾದವೇ ಜಂಗಮ,**
**ಪ್ರಸಾದವೇ ಪರಿಪೂರ್ಣ**
**ಸೌರಾಷ್ಟ್ರ ಸೋಮೇಶ್ವರ ಲಿಂಗದ ಪ್ರಸನ್ನತೆಯೇ ಪ್ರಸಾದ**
**ಇಂತಪ್ಪ ಪ್ರಸಾದ ಮಹಾತ್ಮೆಗೆ ಆನು ನಮೋ ನಮೋ ಎನುತಿರ್ದೆನು.**

ಶರಣರ ದೃಷ್ಟಿಯಲ್ಲಿ ಪ್ರಸಾದವೆಂದರೆ ಪವಿತ್ರವಾದ ಪರಮಜ್ಞಾನ, ಪ್ರಸಾದವೇ ಪರಾಪರ, ಪರಿಪೂರ್ಣ ವಸ್ತು. ಪ್ರಸಾದವೇ ಗುರು, ಲಿಂಗ, ಜಂಗಮ, ಪ್ರಸನ್ನತೆಯನ್ನು ನೀಡುವ, ನಿಜ ಸಮಾಧಾನವನ್ನು ನೀಡುವುದು. ವಚನಗಳ ಆಳ, ಅಗಲ, ವಿಸ್ತಾರ, ಜಗದಗಲ, ಮುಗಿಲಗಲ ನನ್ನ ಮಿತಿಯೊಳಗೆ ಅರ್ಥೈಸಿದ್ದೇನೆ.



**ಇಲ್ಲೇ ಇರುತ್ತೇನೆ!**

ಜಗತ್ಪ್ರಸಿದ್ಧ ಚಿಂತಕ ಜಾರ್ಜ್ ಬರ್ನಾಡ್ ಷಾ ಅವರನ್ನು ಅವರ ಪರಿಚಿತರೊಬ್ಬರು, "ನೀವು ಸತ್ತ ಮೇಲೆ ಎಲ್ಲಿಗೆ ಹೋಗಲು ಇಚ್ಛಿಸಿದ್ದೀರಿ? ಸ್ವರ್ಗಕ್ಕೋ, ನರಕಕ್ಕೋ?" ಎಂದು ಕೇಳಿದರಂತೆ. ಅದಕ್ಕೆ ಬರ್ನಾಡ್ ಷಾ "ಎಲ್ಲಿಗಾದರೂ ಹೋಗುತ್ತೇನೆ. ಆದರೆ ನಾನೇ ಅಲ್ಲಿಗೆ ಮೊದಲಿನವನಾಗಬೇಕು" ಎಂದರು. ಅದಕ್ಕೆ ಆ ಪರಿಚಿತರು "ಅದು ಹೇಗೆ ಸಾಧ್ಯ? ಈಗಾಗಲೇ ಬುದ್ಧ, ಮಹಾವೀರ, ಏಸುಕ್ರಿಸ್ತ, ಜರಾತುಷ್ಟ – ಹೀಗೆ ಅನೇಕರು ಹೋಗಿದ್ದಾರೆ. ಇನ್ನು ನರಕಕ್ಕೆ ಈಗಾಗಲೇ ಹೋಗಿರುವವರಿಗೆ ಲೆಕ್ಕವಿಲ್ಲ. ನೀವು ಹೇಗೆ ಮೊದಲನೆಯವರಾಗಲು ಸಾಧ್ಯ?" ಎಂದರು. ಆಗ ಬರ್ನಾಡ್ ಷಾ "ಹಾಗಾದರೆ ನಾನು ಮೊದಲಿಗನಾಗಿ ಹೋಗುವಂತಹ ಬೇರೆ ಸ್ಥಳವಿದ್ದರೆ ಹೇಳಿ" ಎಂದರು. "ಸತ್ತ ಮೇಲೆ ನೀವು ಮೊದಲಿಗರಾಗಿ ಹೋಗುವಂತಹ ಸ್ಥಳ ಬೇರಾವುದೂ ಇರುವಂತೆ ಕಾಣುವುದಿಲ್ಲ" ಎಂದು ಆ ಪರಿಚಿತರು ಹೇಳಿದರು. "ಹಾಗೆ ಬೇರೆ ಸ್ಥಳವಿಲ್ಲವೆಂದರೆ ಇಲ್ಲೇ ಇರಲು ಇಚ್ಛಿಸುತ್ತೇನೆ. ಏಕೆಂದರೆ, ಇಲ್ಲಿ ಅವೆರಡೂ ಇವೆ" ಎಂದರಂತೆ ಬರ್ನಾಡ್ ಷಾ!

ಸಂಗ್ರಹ

# ಅರ್ಥ ತ್ರಿವಿಧ

**ಪ್ರೊ. ಓ.ಎಲ್. ನಾಗಭೂಷಣಸ್ವಾಮಿ**

*ನಂ. ೪೪೫, ೮ನೆ ಮುಖ್ಯರಸ್ತೆ*

*ಸರಸ್ವತಿಪುರಂ, ಮೈಸೂರು-೫೭೦ ೦೦೯*

*೯೪೮೦೩ ೭೯೮೩೭*

ವಚನವೆಂಬುದು ವಾಗ್ರಚನೆಯಲ್ಲ ಎಂಬುದು ಸಿದ್ಧರಾಮರು ಹೇಳುವ ಮಾತು. ಆದರೆ ವಚನಗಳು ಜನ ಮಾನಸದ ಮೇಲೆ ಬೀರಿರುವ ಪ್ರಭಾವಕ್ಕೆ ವಚನಗಳ ಅಚ್ಚುಕಟ್ಟಾದ ರಚನೆಯ ವಿನ್ಯಾಸವೂ ಕಾರಣ. ದಿನನಿತ್ಯದ ಸರಳವಾದ ಮಾತಿನಲ್ಲಿ ವಚನಗಳನ್ನು ರಚಿಸಿದರು ಅನ್ನುವುದು ಸುಂದರವಾದ ಸುಳ್ಳು. ಹೇಳಬೇಕಾದ ಸಂಗತಿ ಕೇಳುಗರಿಗೆ ಸ್ಪಷ್ಟವಾಗಲು ಯಾವ ರೀತಿಯಲ್ಲಿ ಪದ, ವಾಕ್ಯಗಳನ್ನು ವಿನ್ಯಾಸಗೊಳಿಸಿದರೆ ಪರಿಣಾಮಕಾರಿ ಅನ್ನುವ ಚಿಂತನೆ ವಚನಗಳ ಹಿಂದೆ ಇರದಿದ್ದರೆ ಅವು ಈಗಿರುವ ಹಾಗೆ ಇರುತ್ತಿರಲಿಲ್ಲ.

ದೋಹೆಗಳನ್ನು ಕುರಿತು ಗ್ಯುನ್ಥರ್ ಎಂಬ ವಿದ್ವಾಂಸ ಬೌದ್ಧ ಸಿದ್ಧ ಸರಹ ಪಾದನ ಬಗ್ಗೆ ಬರೆದಿರುವ ಪುಸ್ತಕ ಓದುತಿದ್ದಾಗ ಬಹಳ ಜನಪ್ರಿಯವಾಗಿರುವ ವಚನಗಳಲ್ಲಿ ಆಶಯವನ್ನು ತಿಳಿಸುವ ವಿನ್ಯಾಸದ ಒಂದು ಮಾದರಿಯೂ ಹೀಗಿರಬಹುದೇ ಎಂದು ಇತ್ತೀಚೆಗೆ ವಿಚಾರವೊಂದು ಮೂಡಿತು.

ದೋಹೆ ಅನ್ನುವುದು ಎರಡು ಸಾಲುಗಳ ಕಿರುಕವಿತೆಯಂಥ ರಚನೆ. ಇಪ್ಪತ್ತನಾಲ್ಕು ಮಾತ್ರೆಗಳ ಅಳತೆ ಇರುತ್ತದೆ. ಮೊದಲ ಸಾಲಿನಲ್ಲಿ ೧೩ ಮಾತ್ರೆ, ಎರಡನೆ ಸಾಲಿನಲ್ಲಿ ೧೧ ಮಾತ್ರೆ ಇರುತ್ತವೆ. ಅಪಭ್ರಂಶವೆಂಬ ಆಡುನುಡಿಯಲ್ಲಿ ಹುಟ್ಟಿದ ಈ ಬಗೆಯ ರಚನೆ ಹಿಂದಿಯೂ ಸೇರಿದಂತೆ ಉತ್ತರ ಭಾರತದ ಹಲವು ಭಾಷೆಗಳಲ್ಲಿ ಕಾಣಸಿಗುತ್ತದೆ. ತುಲಸೀದಾಸರು ಬರೆದ ರಾಮಚರಿತ ಮಾನಸ ದೋಹೆಗಳ ಅತ್ಯಂತ ಪ್ರಸಿದ್ಧ ಉದಾಹರಣೆ.

ದೋಹೆಯ ರಚನೆಯನ್ನು ಬೌದ್ಧಧರ್ಮದ ಬೋಧನೆಗೂ ಬಳಸಿಕೊಂಡ ನಿದರ್ಶನಗಳಿವೆ. ದೋಹೆಯ ಬೋಧನೆಯ ವಿನ್ಯಾಸಕ್ಕೂ ಜನಪ್ರಿಯ ವಚನಗಳಲ್ಲಿ ಆಶಯಗಳನ್ನು ಬೆಳೆಸುವ ರೀತಿಗೂ ಸಾಮ್ಯವಿದೆ ಅನ್ನಿಸಿತು. ಮೊದಲಿಗೆ ಹೊರ ಲೋಕದ ನಿಜವಾದ ಚಿತ್ರವನ್ನು ನೀಡಿಆನಂತರ ಆ ಚಿತ್ರವು ಮನಸಿನಲ್ಲಿ ಮೂಡಿಸಿದ ಭಾವ-ಚಿತ್ರವನ್ನು ರೂಪಿಸಿ, ಕೊನೆಗೆ ಕಂಡದ್ದು, ಭಾವಿಸಿದ್ದು ಈ ಎರಡರ ತಳಹದಿಯ ಮೇಲೆ ಹೊಳೆದ ವಿಚಾರವನ್ನೋ, ತತ್ವವನ್ನೋ, ಅನುಭಾವದ ಮಿಂಚನ್ನೋ ಮೂಡಿಸುವುದು ಕಾಣುತ್ತದೆ.



ಬಹಳ ಪ್ರಸಿದ್ಧವಾಗಿರುವ ಬಸವ ವಚನವನ್ನು ನೋಡಿ: 'ಉಳ್ಳವರು ಶಿವಾಲಯವ ಮಾಡಿಹರು ನಾನೇನ ಮಾಡಲಿ ಬಡವನಯ್ಯಾ' ಎಂಬ ಮಾತು ಲೋಕದಲ್ಲಿರುವ ನಿಜವಾದ ಶಿವಾಲಯ, ನಿಜವಾದ ಉಳ್ಳವರು, ಬಡವರು ಮನಸಿಗೆ ಬರುವಂತೆ ಮಾಡುತ್ತವೆ. ಆ ಸಾಲು ಲೋಕದ ನಿಜ ಚಿತ್ರ.

'ಎನ್ನ ಕಾಲೇ ಕಂಬ, ದೇಹವೇದೇಗುಲ, ಶಿರ ಹೊನ್ನ ಕಲಶವಯ್ಯಾ' ಎಂಬ ಸಾಲು ಭಾವದಚಿತ್ರ. ವಚನವನ್ನು ನುಡಿಯುತ್ತಿರುವ ವ್ಯಕ್ತಿಗೆ ನಾನು ಉಳ್ಳವನಲ್ಲ, ಬಡವ, ಏನು ಮಾಡಲಿ, ಶಿವಾಲಯ ಕಟ್ಟಲಾರೆ ಅನ್ನಿಸಿ ತನ್ನ ದೇಹವೇ ದೇಗುಲ ಅನ್ನುವ ಭಾವ ಮೂಡಿ ದೇಹವೇ ದೇಗುಲವಾಗಿ ಭಾವದಚಿತ್ರ ರೂಪುಗೊಳ್ಳುತ್ತದೆ.

'ಕೂಡಲಸಂಗಮದೇವಾ, ಕೇಳಯ್ಯಾ ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎಂಬ ಸಾಲು ಲೋಕದಲ್ಲಿ ಕಂಡ ನಿಜ ಚಿತ್ರ, ಅದು ಮನಸಿನಲ್ಲಿ ಮೂಡಿಸಿದ ಭಾವನೆಗಳ ಕಾರಣದಿಂದ ಹುಟ್ಟುವ ಅರಿವಿನ ಚಿತ್ರ: ಚಲಿಸಲಾಗದ, ಬೆಳೆಯಲಾಗದ ದೇಗುಲ ಅಳಿಯುತ್ತದೆ, ಚಲಿಸುವ, ಬೆಳೆಯುವ ಮನುಷ್ಯನಿಗೆ ಅಳಿವಿಲ್ಲ ಅನ್ನುವಲ್ಲಿ ಮನುಷ್ಯನೇ ಸೃಷ್ಟಿಕರ್ತನೂ ಆಗುವ ಅನುಭಾವದ ಮಿಂಚು ಮೂಡುತ್ತದೆ.

**'ವ್ಯಾಧನೊಂದು ಮೊಲನ ತಂದಡೆ ಸಲುವ ಹಾಗಕ್ಕೆ ಬಿಲಿವರಯ್ಯಾ,**

**ನೆಲನಾಳ್ವನ ಹೆಣನೆಂದಡೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ'**

ಎಂಬ ಸಾಲುಗಳು ಲೋಕದಲ್ಲಿ ಎಲ್ಲರೂ ಬಲ್ಲ ನಿಜವನ್ನೇ ಹೇಳುತ್ತಿವೆ. ಅವು ಚಿತ್ರಿಸುವುದು ಲೋಕದ ನಿಜ ಚಿತ್ರ.

**'ಮೊಲನಿಂದಕರಕಷ್ಟ ನರನ ಬಾಳುವೆ,'**

ಅನ್ನುವ ಸಾಲು ಲೋಕದ ನಿಜ ಮನಸಿನಲ್ಲಿ ಹುಟ್ಟಿಸುವ ಭಾವವನ್ನು ಚಿತ್ರಿಸುತ್ತದೆ. ಸತ್ತ ಮೊಲಕ್ಕೆ ಇರುವ ಬೆಲೆ ಎಂಥ ಪದವಿಯಲ್ಲಿರುವ ಮನುಷ್ಯನ ಹೆಣಕ್ಕೂ ಇಲ್ಲ. ನಾವು ಯಾವುದನ್ನು ಅರ್ಥ, ಬೆಲೆ, ಗೌರವ ಅಂದುಕೊಂಡಿದ್ದೇವೋ ಅವೆಲ್ಲ ನಮ್ಮ ಕಲ್ಪನೆಗಳು ಅನ್ನುವ ಭಾವ ಮೂಡುತ್ತದೆ.

ಇಂಥ ಭಾವದ ಚಿತ್ರ ಮೂಡಿಸುವ ಸಂಕಟವನ್ನು ನೀಗಿಕೊಳ್ಳಲು 'ಸಲೆ ನಂಬೊ ನಮ್ಮ ಕೂಡಲಸಂಗಮದೇವನ' ಅನ್ನುವ ಅರಿವಿನ ಚಿತ್ರ ಮೂಡುತ್ತದೆ.

ಲೋಕದ ನಿಜ ಚಿತ್ರವನ್ನು ಮೂಡಿಸಲು ಪ್ರಾಣಿ, ಪಕ್ಷಿ, ಅಂಗಡಿಯ ಶೆಟ್ಟಿ, ಇಂಥ ನೂರಾರು ಚಿತ್ರಗಳು ಬರುತ್ತವೆ. ಸಾಮಾನ್ಯವಾಗಿ ಲೋಕದ ವಾಸ್ತವ ಚಿತ್ರಣ ಬರುವುದೇ ವಚನಗಳ ಆರಂಭದಲ್ಲಿ. ಆ ಚಿತ್ರಗಳು ಮೂಡಿಸುವ ಭಾವ ಮುಂದಿನ ಹಂತ. ಮೊದಲು ಮೂಡಿದ ಚಿತ್ರಕ್ಕೆ ಭಾವದ ಲೇಪನ ನಡೆಯುತ್ತದೆ. ಅಲ್ಲಿ ಕ್ರಿಯಾಪದವೇ ಮುಖ್ಯವಾದ ವಾಕ್ಯ ಸಾಮಾನ್ಯವಾಗಿ ಬರುತ್ತದೆ. ಬಾರದು, ಕೂಡದು, ಸಲ್ಲದು ಇಂಥ ನಿರಾಕರಣೆಯ, ನಿಷೇಧದ ಕ್ರಿಯಾಪದಗಳೇ ಹೆಚ್ಚು ಅನಿಸಬಹುದು.

ಇನ್ನು ವಿಚಾರ ಅಥವ ಅರಿವಿನ ಚಿತ್ರ ಮೂಡುವ ಕೊನೆಯ ಭಾಗದಲ್ಲಿ ಅಮೂರ್ತವಾದ ನಾಮಪದಗಳೋ ಗುಣವಾಚಕಗಳೋ ಸಾಮಾನ್ಯವಾಗಿ ಕಾಣುತ್ತವೆ. ಮೂರ್ತವಾದ ಲೋಕ-ಅಂತರಂಗದ ಭಾವನೆ-ಅಮೂರ್ತವಾದ ವಿಚಾರ ಅಥವಾ ತತ್ವದ ನಿರೂಪಣೆ ಅನ್ನುವ ವಿನ್ಯಾಸ ರೂಪುಗೊಳ್ಳುತ್ತದೆ.

ಎಲ್ಲ ವಚನಗಳಲ್ಲೂ ಇದೊಂದೇ ವಿನ್ಯಾಸ ಇರುವುದಿಲ್ಲ. ಬೆಡಗಿನ ವಚನ, ಆತ್ಮಾವಲೋಕನದ ವಚನ, ಸಮಾಜವನ್ನುತಿದ್ದುವ ವಚನ ಹೀಗೆ ಬೇರೆ ಬೇರೆ ಉದ್ದೇಶದ ರಚನೆಗಳ ವಿನ್ಯಾಸವೂ ಬೇರೆಯದೇ ಆಗಿರುತ್ತದೆ. ಅವನ್ನು ಕುರಿತು ವಚನಾಸಕ್ತರು ಚರ್ಚಿಸುವುದು, ವಿಚಾರ ವಿನಿಮಯ ಮಾಡುವುದು ಒಳ್ಳೆಯದು.

ಯಾಕೆಂದರೆ ಈಗ ನಮ್ಮ ಸುತ್ತಲೂ ಇರುವ ವಚನವನ್ನು ಕುರಿತ ಮಾತುಗಳನ್ನು ಕೇಳುವಾಗ ವಚನದ ಒಂದು ಮುಖ, ಒಂದು ಅಂಶ, ಒಂದು ವಿವರವನ್ನು ಮಾತ್ರ ಗಮನಿಸಿ ಅತಿಯಾಗಿ ಹಿಗ್ಗಿಸಿ ಹೇಳುವ ಮನೋಧರ್ಮ ಸಾಮಾನ್ಯವಾಗಿ ಕಾಣುತ್ತದೆ. ವಚನದ ರಚನೆಯ ವಿನ್ಯಾಸಕ್ಕೆ ಗಮನ ನೀಡಿದರೆ ವಚನ ಉಕ್ತಿಗಳು ಎಷ್ಟು ಜತನದಿಂದ ರೂಪುಗೊಂಡಿವೆ ಅನ್ನುವುದು ತಿಳಿಯುತ್ತದೆ. ಬಸವಣ್ಣ, ಅಲ್ಲಮ, ಇಂಥ ವಚನಕಾರರ ರಚನಾ ವಿನ್ಯಾಸಗಳನ್ನು ಗುರುತಿಸಿ ವಿಶ್ಲೇಷಿಸಿದರೆ ಆನಂತರದ ಕಾಲದಲ್ಲಿ ಅವರ ಹೆಸರಿನೊಂದಿಗೆ ಸೇರ್ಪಡೆಯಾದ ವಚನಗಳನ್ನು ಪತ್ತೆ ಹಚ್ಚುವುದಕ್ಕೂ ನೆರವಾಗುತ್ತದೆ.

ವಚನಗಳಲ್ಲಿರುವ ಲೋಕದ ನಿಜ ಚಿತ್ರ, ಭಾವಚಿತ್ರ, ಅರಿವಿನ ಚಿತ್ರ ಇವು ಅರ್ಥದ ತ್ರಿವಿಧಗಳೆಂದೇ, ವಚನಾರ್ಥದ ಮೂರು ಆಯಾಮಗಳೆಂದೇ ನನಗೆ ತೋರುತ್ತಿದೆ.

●



ನಾ ಬಂದೆ ಹರಿಭಕ್ತನಾಗಿ
ಬಾಹಾಗ ನಾ ದಾಸನಾಗಿ
ಒಂಬತ್ತು ಜೂಳಿಯ ತಣ್ಣೀರ ಕಣಿತೆಯ ಹೊತ್ತು
ತಿತ್ತಿಗ ನೀರ ಕಾಣೆ
ಲೆಕ್ಕವಿಲ್ಲದ ನಾಮವನಿಕ್ಕಿದೆ
ಸುತ್ತಿ ಸುತ್ತಿ ಬಳಸಿದೆ
ಹೀಲಿಯ ಗರಿಯ ಹೇಕಣ್ಣ
ಪಜ್ಜೆಯ ನಾಮವ ದೃಷ್ಟಿಯ ಮಧ್ಯದಲ್ಲಿ ಇಕ್ಕಿ
ಮತ್ತೆ ಅದರ ನಡುವೆ ನಿಶ್ಚಯ ಬಿಳಿಯ ನಾಮವನಿಕ್ಕಿ
ಹೊತ್ತ ದಾಸಿಕೆ ಹುಸಿಯಾಯಿತ್ತು
ದಾಸೋಹವೆಂಬುದನರಿಯದೆ ಎನ್ನ ವೇಷ ಹುಸಿಯಾಯಿತ್ತು
ನಾರಾಯಣಪ್ರಿಯ ರಾಮನಾಥಾ



# ಸಮಾನತೆಯ ಶಕ್ತಿಯೇ ಬಸವಣ್ಣ

**ಸ.ರಾ. ಸುಳಕೂಡೆ**

*ನಂ. ೧೩೧೯, ಶ್ರೀ ಶಿವಪ್ರಸಾದ*
*ರಾಮತೀರ್ಥ ನಗರ, ಬೆಳಗಾವಿ – ೧೫*

ಭಾವ–ಭಕ್ತಿಯಲ್ಲಿ ಸರ್ವರಿಗೂ ಅಣ್ಣನಾಗಿ, ಇಂದಿಗೂ ಸಕಲರೂ ನಮ್ಮವ, ನಮ್ಮವ ಎಂದು ಅಪ್ಪಿಕೊಳ್ಳುವ ಆಪ್ತತೆಯನ್ನು ಹೊಂದಿರುವ ಬಸವಣ್ಣನವರು, ಸಾರ್ವಕಾಲಿಕ ಸಮಾನತೆಯ ಕೇಂದ್ರ ಬಿಂದುವಾಗಿ ಉಳಿದಿದ್ದಾರೆ. ಅವರು ಸಕಲರನ್ನು ಅಪ್ಪಿಕೊಂಡು, ಶೋಷಣೆರಹಿತ ಸಮಾಜ ನಿರ್ಮಿಸಿದ್ದು ಮಾನವೀಯ ಸಂಬಂಧಗಳ ಕ್ರಿಯಾಶೀಲತೆಯೇ ಆಗಿದೆ. ಜ್ಞಾನವೇ ಬಲವೆಂದು, ಜ್ಞಾನವಂತರು, ಸಮಾಜದ ಹಿತಚಿಂತನೆಗಿಂತ ತಮ್ಮ ಶ್ರೇಷ್ಠತೆಯನ್ನೇ ಬಂಡವಾಳ ಮಾಡಿಕೊಂಡು ತರ–ತಮ ಭಾವಕ್ಕೆ ಬುನಾದಿ ಹಾಕಿದ್ದನ್ನು ದಿಟ್ಟತೆಯಿಂದ ಎದುರಿಸಿದ ಬಸವಣ್ಣನವರು, ಸಕಲರೂ ಸಮಾನರು, ಸರ್ವ ಕೆಲಸ ಕಾರ್ಯ, ಉದ್ಯೋಗಗಳು ಸಮಾನವೆಂದು ನಡೆದು ತೋರಿಸಿದರು. ಅವರು ಮಾನವನ ಬದುಕನ್ನು ಎತ್ತರಿಸುವ ಪಣತೊಟ್ಟು, ಸಾಧಿಸಿದ ಸಿದ್ಧಿಗಳು ಇಂದಿನ ಮಾನವ ಸಂಪನ್ಮೂಲ ಸೂಚ್ಯಾಂಕಗಳ ಗುರಿ ಸಾಧನೆಗೆ ಪ್ರೇರಕ ಶಕ್ತಿಗಳಾಗಿಯೂ ಪ್ರಸಿದ್ಧಿಯನ್ನು ಹೊಂದಿವೆ. ಅಂದು ಕನ್ನಡ ನಾಡಿಗೆ ಬಸವಣ್ಣನವರ ಸರ್ವ ಸಮಾನತೆಯ ಮತ್ತು ಕಾಯಕಕ್ಕೆ ನೀಡಿದ ಗೌರವಕ್ಕಾಗಿ ಮನಸೋತು ಹಂಬಲಿಸಿ ದೇಶ–ವಿದೇಶಗಳಿಂದ ಸಾಧಕರು ಬಂದರಲ್ಲದೆ ಶರಣ ಸಂಸ್ಕೃತಿಯೊಳಗೆ ನಿಷ್ಠೆ ಹೊಂದಿ ದುಡಿದು ಅನುಭಾವಿಗಳಾಗಿ ಹೊಮ್ಮಿದ್ದು ವಿಶೇಷ.

ಬಸವಣ್ಣನವರ ಶ್ರೇಷ್ಠತೆಗೆ ಮಾರುಹೋದ ವಿಚಾರವಂತರು, ವಿದ್ಯೆ–ಬುದ್ಧಿಯುಳ್ಳವರು, ಬಸವಪ್ರಜ್ಞೆಯನ್ನು ಬಹುವಾಗಿ ಮೆಚ್ಚಿಕೊಂಡು ಬದುಕಿನ ಆಯಾಮಕ್ಕೆ ಹೊಸ ಹೊಳಪು ತಂದುಕೊಂಡಿರುವುದು ಕಾಲಕಾಲದ ಬೆಳಕಿನ ಭಾಗವೇ ಆಗಿದೆ. ಜನಸಾಮಾನ್ಯರ ಜೀವನ ಉಜ್ವಲಗೊಳಿಸಲು ಹಮ್ಮಿಕೊಳ್ಳುತ್ತಿರುವ ಸಾರ್ವಜನಿಕ ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸುವಾಗಲೂ ಬಸವಪ್ರಭೆಯನ್ನು ಬಳಸಿಕೊಳ್ಳುತ್ತಿರುವುದು ಸರ್ವೇಸಾಮಾನ್ಯವಾಗಿದೆ.

ಕನ್ನಡ ಸಾಹಿತ್ಯ ಲೋಕ, ಸಾಂಸ್ಕೃತಿಕ ಲೋಕ, ಶೈಕ್ಷಣಿಕ ಲೋಕ ವೈಚಾರಿಕತೆಯ ಲೋಕ ಬಸವಪ್ರಜ್ಞೆಯ ಆಧಾರವಿಟ್ಟುಕೊಂಡು ಹೊಸ ಹೊಳಪು ಪಡೆಯುತ್ತಿರುವುದಕ್ಕೆ ಹೆಚ್ಚಿನ ಅಭ್ಯಾಸದ ಅಗತ್ಯವಿಲ್ಲೆಂದು ಸರ್ವರೂ ಒಪ್ಪಿಕೊಳ್ಳುವ ಮಾತೇ ಆಗಿದೆ. ಒಂದು ಅರ್ಥದಲ್ಲಿ ನಮ್ಮ ನಾಡು ಬಸವಮಯಗೊಳ್ಳುತ್ತಲಿದೆ. ಬಸವಣ್ಣನವರ 'ಕಲ್ಯಾಣ'ದತ್ತ ಸಾಗುವಲ್ಲಿಯೇ ಸಾರ್ಥಕವೆಂಬ ಅಭಿಮಾನವು ಉಕ್ಕೇರುತ್ತಲಿದೆ. ಬಸವಣ್ಣನವರ ಸಮೂಹ ಪ್ರಜ್ಞೆ, ಸಾಮೂಹಿಕ ವಿಚಾರ ವಿಮರ್ಶೆ, ಆಧುನಿಕ ಯುಗದ ವಿಚಾರಧಾರೆಯ ಗಟ್ಟಿತನಕ್ಕೆ ಸ್ಪಂದಿಸುತ್ತಿರುವುದನ್ನು ಸೂಚಿಸುತ್ತದೆ. ಬಸವಣ್ಣನವರ 'ಕಲ್ಯಾಣ ಕ್ರಾಂತಿ' ಮಾನವನ ಜೀವನ

ಮೌಲ್ಯ, ಮಾನವ ಹಕ್ಕುಗಳಿಗೆ ಬಲ ತಂದ ಕ್ರಾಂತಿ ಎಂದೂ ವ್ಯಾಖ್ಯಾನಿಸಬಹುದಾಗಿದೆ. ಮನುಕುಲದ ಏಕತೆಯೂ ಕಲ್ಯಾಣಕ್ರಾಂತಿಯ ಇನ್ನೊಂದು ಮಗ್ಗುಲೆಂದು ಹೇಳಬಹುದು. ಆದರ್ಶ ಸಮಾಜದ ಮಾನವ ಬಯಸುವ ಮಾನ-ಮರ್ಯಾದೆ, ಹಕ್ಕು, ಸ್ಥಾನ-ಮಾನ, ಆದರ್ಶ, ಜೀವನ ಮೌಲ್ಯ, ಅನ್ಯೋನ್ಯತೆ, ಸಾಮರಸ್ಯ, ಶಾಂತಿ, ದಯೆ ಎಲ್ಲವೂ ಬಸವಣ್ಣನವರ ಕಾಯಕ ತತ್ವ, ಅನುಭವ ಮಂಟಪ, ಮಹಾಮನೆಯ ಮೂಲಕ ಸಾಕಾರಗೊಂಡಿರುವುದನ್ನು ನೆನಪಿಸದಿರಲಾರವು. ಬಸವಣ್ಣನವರಷ್ಟು ಅಂತರಂಗ-ಬಹಿರಂಗ ತೆರೆದಿಟ್ಟ ಮಹಾನುಭಾವ ಮತ್ತೊಬ್ಬರೂ ಸಿಗಲಾರರು. ಅವರ ಜೀವನ ಪಾರದರ್ಶಕತೆಗೆ ಉತ್ತಮ ಉದಾಹರಣೆಯಾಗಿದೆ. ವ್ಯಕ್ತಿತ್ವ ವಿಕಸನ, ವ್ಯಕ್ತಿತ್ವ ನಿರ್ಮಾಣದ ಸುಲಭ ಸೂತ್ರಗಳು 'ಬಸವ ಪ್ರಜ್ಞೆ'ಯಲ್ಲಿ ಬೆಳಕು ಕಂಡಿವೆ. ಅವರು ಭಾರತೀಯ ಸಂಸ್ಕೃತಿಗೆ ಹೊಸ ದಿಕ್ಕು ತೋರಿಸಿದ ರೀತಿಯ ಸಮಾನತೆಯ ಸಾಕಾರಕ್ಕೆ ಸ್ಫೂರ್ತಿಯಾಗಿದೆ.

ಬಸವಣ್ಣನವರು ಹೋರಾಟಕ್ಕೆ ಒಂದು ನಿದರ್ಶನರಾಗಿ ಇಂದಿಗೂ ಸ್ಫೂರ್ತಿಯಾಗಿ ನಿಂತಿದ್ದಾರೆ. ಬದಲಾವಣೆ, ಪ್ರಗತಿ, ವಿಕಾಸಕ್ಕೊಂದು ಸ್ಫೂರ್ತಿಯಾಗಿರುವ ಬಸವಣ್ಣನವರು ಮಾನವ ಸಂಪನ್ಮೂಲ ಸದ್ಬಳಕೆಯಿಂದಲೇ ಸಮಗ್ರ ಅಭಿವೃದ್ಧಿ ಸಾಧಿಸಲು ಸಾಧ್ಯವೆಂಬುದನ್ನು ತೋರಿಸಿಕೊಟ್ಟಿದ್ದಾರೆ. "ನಿಜವಾಗಿಯೂ ಜೀವಂತವಾಗಿರುವ ಕ್ಷಣಗಳೆಂದರೆ ನಾವು ಕ್ರಿಯಾಶೀಲ ಚಿಂತನೆಯಲ್ಲಿ ತೊಡಗಿದ ಕ್ಷಣಗಳು ಮಾತ್ರ. ಯಾಕೆಂದರೆ ಚಿಂತನೆಯೊಂದೇ ನಮ್ಮ ಜೀವನದ ಸೂಕ್ಷ್ಮವಾದ ಭಾಗ. ಈ ವಿಚಾರವನ್ನು ಮುಂದಿಟ್ಟು ನೋಡಿದಾಗ ಬಸವಣ್ಣನವರು ಕಟ್ಟಿದ ಶರಣ ಸಂಸ್ಕೃತಿಯ ಸರ್ವ ರೀತಿಯಿಂದಲೂ ಕ್ರಿಯಾಶೀಲತೆಗೆ ಆದ್ಯತೆ ನೀಡಿದ್ದು, ಆದರ್ಶ ಜೀವನಕ್ಕೆ ಪ್ರೇರಕಗಳಾಗಿವೆ.

ಬಸವಣ್ಣನವರು ಧರ್ಮ, ಕ್ರಾಂತಿಯ ಹೆಸರಿನಿಂದ ಭ್ರಮೆಗಳನ್ನು ಹುಟ್ಟಿಸಲಿಲ್ಲ, ಶೋಷಣೆಗೆ ಯಾವುದೇ ಅವಕಾಶ ಮಾಡಿಕೊಡಲಿಲ್ಲ. ವಾಸ್ತವತೆಯ ಬದುಕನ್ನು ಪರಿಚಯಿಸುವ ನಿಟ್ಟಿನಲ್ಲಿ ಬಸವಣ್ಣನವರ ಕೊಡುಗೆ ಅಗಾಧವಾಗಿದೆ. ಶೋಷಣೆ, ಕಂದಾಚಾರ, ಮೂಢನಂಬಿಕೆ, ಪಂಚಾಂಗ, ತಿಥಿ, ನಕ್ಷತ್ರ ಎಲ್ಲವನ್ನು ಮೀರಿ ನಿಲ್ಲುವಂತೆ ಮಾಡಿದ ಬಸವಣ್ಣನವರು ಕೇವಲ ಧರ್ಮದ ಸಂಸ್ಥಾಪಕನಾಗಿರದೆ, ನವಸಮಾಜದ ನಿರ್ಮಾಪಕರೂ ಆಗಿದ್ದಾರೆ. ಶರಣ ಸಂಸ್ಕೃತಿಯೊಂದನ್ನು ಬೆಳೆಸಿದ ಬಸವಣ್ಣನವರು ಸತ್ಯ ಶುದ್ಧ ಕಾಯಕದಿಂದ ಜೀವನವನ್ನು ಉನ್ನತೀಕರಿಸಿಕೊಂಡು ಬದುಕಲು ಸಾಧ್ಯವೆಂಬುದನ್ನು ಯಾವುದೇ ಸಂಶಯಕ್ಕೆ ಎಡೆಗೊಡದಂತೆ ಸಿದ್ಧಿಸಿ ತೋರಿಸಿದ್ದು ಐತಿಹಾಸಿಕ ಘಟನೆಯೇ ಆಗಿದೆ. ಬಸವಣ್ಣನವರು ಧರ್ಮಸಂಸ್ಥಾಪಕನಾಗಿರುವ ಜೊತೆಗೆ ಆ ಧರ್ಮದ ಪೂರ್ವಾಚಾರನೆಂಬುದನ್ನು ಪ್ರಭುದೇವರು ನಿವೇದಿಸಿದ್ದು ಚಾರಿತ್ರಿಕವೇ ಆಗಿದೆ.

**ಆದಿಯಲಿ ನೀನೇ ಗುರುವಾದ ಕಾರಣ ನಿನ್ನಿಂದ ಹುಟ್ಟಿತ್ತು ಲಿಂಗ.**
**ಆದಿಯಲಿ ನೀನೇ ಲಿಂಗವಾದ ಕಾರಣ ನಿನ್ನಿಂದ ಹುಟ್ಟಿತ್ತು ಜಂಗಮ.**
**ಆದಿಯಲಿ ನೀನೇ ಜಂಗಮವಾದ ಕಾರಣ ನಿನ್ನಿಂದ ಹುಟ್ಟಿತ್ತು ಪ್ರಸಾದ.**
**ಇಂತೀ ಗುರು ಲಿಂಗ ಜಂಗಮ ಪ್ರಸಾದ ಪಾದೋದಕ ಸ್ವರೂಪ ನೀನೆಯಾದ ಕಾರಣ.**
**ಜಂಗಮಪ್ರಾಣಿಯಾಗಿ ಸದಾಚಾರಿಯಾದೆ.**
**ಅದು ಕಾರಣ ನೀನೆ ಸರ್ವಾಚಾರ ಸಂಪನ್ನನಾಗಿ ಪೂರ್ವಾಚಾರಿ ನೀನೆಯಾದ ಕಾರಣ,**
**ಗುಹೇಶ್ವರ ಲಿಂಗದಲ್ಲಿ ಚಂದಯ್ಯನಂತೆ ಲಿಂಗದ ನಿಜವ**
**ತಿಳುಹಾ ಸಂಗನ ಬಸವಣ್ಣ.**



ಬಸವಣ್ಣನವರು ಲಿಂಗ, ಜಂಗಮ, ಪ್ರಸಾದ, ಪಾದೋದಕ, ಕಾಯಕ ಮುಂತಾದವುಗಳಿಗೆಲ್ಲ ಮೂಲನಾಗಿರುವುದನ್ನು ಅಲ್ಲಗಳೆಯದಷ್ಟು ಪುರಾವೆಗಳಿದ್ದರೂ ಇಂದಿಗೂ ಕೆಲವರು ಬಸವಣ್ಣನವರ ಕೊಡುಗೆಗಳ ಕುರಿತು ಅಪಸ್ವರ ಎತ್ತುತ್ತಿರುವುದು ಸೋಜಿಗದ ಸಂಗತಿಯಾಗಿದೆ. ಇಷ್ಟಲಿಂಗ, ಜಂಗಮ, ಪ್ರಸಾದ, ಪಾದೋದಕ, ಕಾಯಕ, ದಾಸೋಹ, ಅನುಭಾವ ಪ್ರಜ್ಞೆಯನ್ನು ಪ್ರಜ್ವಲಿಸಿರುವ ಬಸವಣ್ಣನವರು ಜಗತ್ತಿಗೆ ಹೊಸ ಬೆಳಕನ್ನು ತಂದಿರುವುದನ್ನು ಇನ್ನೂ ನಂಬದಂತಿರುವ ಕೆಲವರಿಗೆ ವಚನ ಸಾಹಿತ್ಯ ಮತ್ತು ಶರಣರ ಅಳಿದುಳಿದ ಕುರುಹುಗಳನ್ನು ಪರಿಚಯಿಸುವ ಅಗತ್ಯವಿದೆ. ಇಂದಿನ ದಿನಮಾನಗಳನ್ನು ಬಸವಪ್ರಜ್ಞೆಯ ದಿನಮಾನಗಳಾಗಿವೆ. ಬಸವಣ್ಣನವರ ಆಚಾರ-ವಿಚಾರಗಳು ಜನಮನ್ನಣೆ ಪಡೆದುಕೊಳ್ಳುತ್ತಿವೆ. ಜನರು ಶರಣ ಸಂಸ್ಕೃತಿಯನ್ನರಿತು ಜೀವನೋತ್ಸಾಹವನ್ನು ಪಡೆದುಕೊಳ್ಳುತ್ತಲಿದೆ. ಜಗತ್ತಿನ ಪ್ರಜ್ಞಾವಂತರು ಬಸವ ಪ್ರಭೆಗೆ ಒಳಗಾಗಿ ಪ್ರಶಂಸಿಸುತ್ತಿದ್ದಾರೆ. ಇಂಥ ಪರಿಸರದಲ್ಲೂ ಬಸವಣ್ಣನವರು ಲಿಂಗವಂತ ಸಮಾಜ ನಿರ್ಮಾಣದ ರೂವಾರಿಗಳೆಂದು ಅರಿತುಕೊಳ್ಳದೇ ವರ್ತಿಸುವುದು ಸಾಧುವೂ ಅಲ್ಲ, ಸತ್ಯದ ಸೂತ್ರವಂತೂ ಅಲ್ಲವೇ ಅಲ್ಲ.

ಬಸವಣ್ಣನವರ ಎಲ್ಲ ಕೆಲಸ-ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ ಮಡಿವಾಳ ಮಾಚಿದೇವರು ತನ್ನೆಲ್ಲ ಸರ್ವಸ್ವವನ್ನು ಬಸವಣ್ಣನಲ್ಲಿ ಕಂಡುಕೊಂಡ ಅನುಭಾವದ ನುಡಿಗಳು ಮನಮುಟ್ಟುವಂತಹುಗಳಾಗಿವೆ. ಬಸವಣ್ಣನವರು ಕಾಯಕನಿಷ್ಠೆಯನ್ನು ಪ್ರಕಾಶಿಸುವ ಮೂಲಕ ಸಮಾನತೆಯ ಅರಿವು ಮೂಡಿಸಿದ ಫಲವಾಗಿ ಸರ್ವರೊಳಗೆ ಬಸವಪ್ರಭೆ ಬೆಳಗಿಕೊಂಡಿತು. ಅದು ಅನುಭಾವದ ಅಭಿವ್ಯಕ್ತಿಯಾಗಿ ಹೊರಹೊಮ್ಮಿತು.

**ಶಿವ ತಾನೀತ ಮರ್ತ್ಯಲೋಕವ ಪಾವನವ ಮಾಡಲು,**
**ಗುರು ತಾನೀತ ಎನ್ನ ಭವರೋಗವ ಭೇದಿಸಲು,**
**ಭಕ್ತ ತಾನೀತ ಎನಗೆ ವಿಸ್ತಾರವಾಗಿ.**
**ಎನಗೆ ಜಂಗಮ ತಾನೀತ ಅನಾದಿ ಸಂಸಿದ್ಧ ಘನಮಹಿಮನಾಗಿ.**
**ಲಿಂಗ ತಾನೀತ ಎನಗೆ ಪ್ರಾಣಲಿಂಗ ತಾನಾಗಿ.**
**ಎನ್ನ ವಿಸ್ತಾರವು ತಾನೀತ ಎನ್ನ ನಿಲುಕಡೆಯ ತಾನಾಗಿ,**
**ಎನ್ನ ಸರ್ವ ಸ್ವಾಯತವ ಮಾಡಿದ ಮಹಿಮ ತಾನೀತ ಕಾಣಾ,**
**ಕಲಿದೇವರದೇವಾ, ನಿಮ್ಮ ಶರಣ ಬಸವಣ್ಣನು.**
**ಬಸವಣ್ಣನ ನಡೆ ಪರುಷ, ಬಸವಣ್ಣನ ನುಡಿ ಪರುಷ**
**ಬಸವಣ್ಣನ ದೃಷ್ಟಿ ಪರುಷ, ಬಸವಣ್ಣನ ಹಸ್ತ ಪರುಷ**
**ಬಸವಣ್ಣನ ಭಾವ ಪರುಷ, ಬಸವಣ್ಣನ ಮನ ಪರುಷ**
**ತನು ಮನ ಧನವ ನಿವೇದಿಸಿದಾತ ಬಸವಣ್ಣನು**
**ಬಸವಣ್ಣನ ನೆನೆವುದೆ ಕಲ್ಯಾಣವೆನಗೆ**
**ಕಲಿದೇವಯ್ಯಾ ನಿಮ್ಮ ಶರಣ ಬಸವಣ್ಣನಿಂತಹ ಮಹಿಮ ನೋಡಯ್ಯಾ!**

ಬಸವಣ್ಣನವರು ತಮ್ಮ ಸಮಕಾಲೀನ ಎಲ್ಲ ಸ್ತರದ ಜನರ ಜೀವನ ಆಶಾಕಿರಣವಾಗಿ ಪ್ರಕಾಶಿತಗೊಂಡು ಇಂದಿನ ಜೀವನಕ್ಕೂ ಮಾರ್ಗದರ್ಶನ ನೀಡುವ ಹೊಂಬೆಳಕಾಗಿ ನಿಂತಿದ್ದಾರೆ. ಅವರನ್ನು ನಡೆ-ನುಡಿ ಏಕಗೊಳಿಸಿದ ಮಹಾಪುರುಷರೆನ್ನುವುದು ಸಮಂಜಸವೇ ಆಗಿದೆ.

ಬಸವಣ್ಣನವರು ಹೃದಯವಂತಿಕೆಗೆ ಇನ್ನೊಂದು ಹೆಸರಾಗಿದ್ದಾರೆ. ಅವರ ಭಾಷೆ ಮಧುರವಾಗಿದೆ. ಅವರು ಆಚರಣೆಗೆ ತಂದ ಕಾಯಕ ನಿಷ್ಠೆಯು ಸಿರಿಸಮೃದ್ಧಿ ತರುವ ವಾಹಕವಾಗಿದೆ. ಅವರು ನಂಬಿದ ದಾಸೋಹ ತತ್ತ್ವವು ಸಶಕ್ತ ಜೀವನ ಸುಧೆಯಾಗಿದೆ. ಬಸವಣ್ಣನವರ ಜೀವನ ಸಾಧನೆಯನ್ನು ಮನಸಾರೆ ಮೆಚ್ಚದ ಮನುಜರಿಲ್ಲವೆಂದು ಹೇಳಬಹುದಾಗಿದೆ. ಜೀವನದ ಒಳ-ಹೊರಗಿನ ದಿವ್ಯವನ್ನು ಹೊರಹೊಮ್ಮಿಸಿದ ಬಸವಣ್ಣನವರು ಎಂದೂ ನಂದಲಾರದ ಜ್ಯೋತಿಯಾಗಿದ್ದಾರೆ. ಬಸವಣ್ಣನವರ ಬದುಕು, ಸಮಾನತೆಯನ್ನೇ ಸೃಷ್ಟಿಸುವುದಕ್ಕಾಗಿಯೇ ಮೀಸಲಾಗಿತ್ತು ಅವರು, ತಮ್ಮ ಸತ್ಸಂಗದೊಳಗೆ ಸರ್ವರನ್ನು ಅಪ್ಪಿಕೊಳ್ಳುವ, ಒಪ್ಪಿಕೊಳ್ಳುವ ವಿಧಾನವನ್ನೇ ಪಸರಿಸಿದರು. ಹೀಗಾಗಿ ಅಂದಿನ ಸಮಾಜದೊಳಗೆ ತರತಮ ಭಾವಕ್ಕೆ ಅವಕಾಶವೇ ಸಿಗಲಿಲ್ಲ.

**ಮರ್ತ್ಯಲೋಕಕ್ಕೆ ಮಹವ ತಂದ ಗಣಪ್ರಸಾದಿ ಬಸವಣ್ಣ**
**ಪ್ರಥಮ ಕಾಲದಲ್ಲಿ ದೇವಗಣ, ಮಹಾಗಣ, ಸುರಗಣ, ಕಿನ್ನರಗಣ ಸಹಿತ**
**ನಮ್ಮ ಬಸವಣ್ಣನು ಗಣಪ್ರಸಾದಿಯಾಗಿ ಮರ್ತ್ಯಲೋಕಕ್ಕೆ ಮಹವ ತಂದು**
**ಶಿವಗಣದ ಮಾಡಿದಾತನು ಬಸವಣ್ಣನು**
**ಸ್ವರೂಪ ಸಾರಾಯವನು ಪದಾರ್ಥವೆಂದಾತ ನಮ್ಮ ಬಸವಣ್ಣನು**
**ಕಲಿದೇವರದೇವಾ, ನಿಮ್ಮ ಶರಣ ಬಸವಣ್ಣನಿಂದಾನು ಬದುಕಿದೆನು.**

ಗುರು, ಲಿಂಗ, ಜಂಗಮ ಭಕ್ತಿಯ ಪರಾಕಾಷ್ಠೆಯಲ್ಲಿ ಎಲ್ಲವನ್ನು ಕಂಡುಕೊಂಡು ಜನಜೀವನಕ್ಕೆ ಜೀವನ ಮಹಿಮೆಯನ್ನು ಸರಳೀಕರಿಸಿದ ಬಸವಣ್ಣನವರು ಮೊದಲು ಆಯ್ದುಕೊಂಡ ಕೆಲಸವೇನು? ಎಂಬ ಕುರಿತು ಚಿಂತನೆ ಮಾಡಿದಾಗ, ನಮ್ಮ ಮುಂದೆ ನಿಲ್ಲುವುದು 'ಅರಿವೇ ಗುರು'ವೆಂಬ ಧೀರೋಕ್ತಿ, ತನ್ನ ತಾನರಿಯುವ ಪ್ರಜ್ಞಾಪೂರ್ಣ ಯುಕ್ತಿ, ಬಸವಣ್ಣನವರು ವ್ಯಕ್ತಿಯ ಜೀವನದಲ್ಲಿ ಬರುವ ನಾನಾ ಸಂಗ-ಸಂದರ್ಭಗಳನ್ನು ಅರ್ಥೈಸಿಕೊಳ್ಳುವ ವಿವೇಕವನ್ನು ಜಾಗ್ರತಗೊಳಿಸಿದರು. ವಿಚಾರವಂತರ ಮತ್ತು ಕಾಯಕದಿಂದಲೇ ಬದುಕುವವರೆಲ್ಲರನ್ನು ಒಂದೆಡೆ ಒಗ್ಗೂಡಿಸಿ ಅನುಭಾವವನ್ನು ಸಾರ್ವತ್ರಿಕಗೊಳಿಸಿದ ಬಸವಣ್ಣನವರು, ಸಕಲರಿಗೂ ಜೀವನದ ಸಿದ್ಧಿಯನ್ನು ಸೂತ್ರೀಕರಿಸಿದರು. ದೇವರು, ದೇವಾಲಯ, ಪುರೋಹಿತ, ಯಜ್ಞಯಾಗ ಮುಂತಾದ ಅನಿಷ್ಟಗಳನ್ನು ತೊರೆಯಲು ಹೇಳಿದ ಬಸವಣ್ಣನವರು ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲೆಂದು ಸಾರಿದರು.

**ನೂರನೋದಿ ನೂರ ಕೇಳಿ ಏನು?**
**ಆಸೆ ಬಿಡದು, ರೋಷ ಪರಿಯದು**
**ಮಜ್ಜನಕ್ಕೆರೆದು ಫಲವೇನು?**
**ಮಾತಿನಂತೆ ಮನವಿಲ್ಲದ ಜಾತಿ(ಡಂ)ಬರ ನೋಡಿ**
**ನಗುವ ನಮ್ಮ ಕೂಡಲಸಂಗಮದೇವ.**



ಇಹದ ಜೀವನ ಹೇಯ, ಭ್ರಾಂತಿ, ಮಿಥ್ಯ, ಮಾಯೆ... ಎಂದೆಲ್ಲ ಹೇಳುತ್ತ ದೇಹದಂಡನೆ ಮಾಡಿಕೊಳ್ಳುತ್ತ ಹೊರತ ವಿತರ್ಕವನ್ನು ಪರಾಮರ್ಶಿಸಿಕೊಂಡು ನೋಡುವ ಎಚ್ಚರ ಭಾವವನ್ನು ಹುಟ್ಟಿಸಿದ ಬಸವಣ್ಣನವರು ಕಾಯಕದಿಂದ ಕೈಲಾಸ ಎಂಬ ಆಯಾಮವನ್ನು ಸಾರ್ವತ್ರಿಕಗೊಳಿಸಿದರು. ಮನುಷ್ಯ ಜನ್ಮವು ಶ್ರೇಷ್ಠವೆಂದು ಮನನ ಮಾಡಿಕೊಂಡು ನಡೆದು ತೋರಿಸಿ, ಪ್ರಸಾದ ಕಾಯವನ್ನು ಬಳಸಿಕೊಂಡು ಸದ್ಗತಿ, ಸುಗುಣ, ಸನ್ಮತಿ ಪಡೆಯಲು ಸಾಧ್ಯವೆಂಬ, ಮಹೋನ್ನತಿಯನ್ನು ಬಸವಣ್ಣನವರು ಸುನಿಶ್ಚಿತಗೊಳಿಸಿದರು.

**ನೆಲವೊಂದೆ: ಹೊಲಗೇರಿ ಶಿವಾಲಯಕ್ಕೆ,**
**ಜಲವೊಂದೆ: ಶೌಚಚಮನಕ್ಕೆ,**
**ಕುಲವೊಂದೆ: ತನ್ನ ತಾನರಿದವಂಗೆ,**
**ಫಲವೊಂದೆ: ಷಡುದರುಶನ ಮುಕ್ತಿಗೆ,**
**ನಿಲವೊಂದೆ: ಕೂಡಲಸಂಗಮದೇವಾ ನಿಮ್ಮನರಿದವಂಗೆ.**

ದಲಿತರ, ಶೋಷಿತರ, ದುರ್ಬಲರ, ಮಹಿಳೆಯರ ಪರವಾಗಿ ದಿಟ್ಟನಿಲುವು ತಳೆದ ಬಸವಣ್ಣನವರು, ಸಕಲರೆಲ್ಲರನ್ನು ಸಮಾನತೆಯೊಂದಿಗೆ ಅಭಿಮಾನ ಬಳಸಿಕೊಳ್ಳುವಂತೆ ಪ್ರೇರಣೆ ನೀಡಿದುದು, ಚೇತೋಹಾರಿಯಾಗಿದೆ. ಜಗದೊಳಗಿನ ಭೇದಭಾವಕ್ಕೆ ತಡೆಯೊಡ್ಡಿ ಯಶಸ್ಸು ಗಳಿಸಿದ ಕೆಲವೇ ಕೆಲವರಲ್ಲಿ ಬಸವಣ್ಣನವರು ಎದ್ದು ಕಾಣುತ್ತಾರೆ. ಮಾನವ ಬದುಕನ್ನು ಸರ್ವಾಂಗ ಸುಂದರಗೊಳಿಸಿ ಸರ್ವರಲ್ಲಿ ಆತ್ಮವಿಶ್ವಾಸ ಮೂಡಿಸಿದ ಬಸವಣ್ಣ ಸಕಲರಿಗೂ ಲೇಸನ್ನು ತಂದ ಮಹಾನುಭಾವ, ಮನುಕುಲದ ಉದ್ಧಾರಕ, ಇದಲ್ಲದೆ ತಮ್ಮ, ತಮ್ಮ ಶಕ್ತಿ ಅರಿತುಕೊಳ್ಳುವ ಅರಿವು ಮೂಡಿಸಿದ ಧೀರರಿವರು.

ಬಸವಣ್ಣನವರು ಮಾತು ಕೃತಿಗಳಲ್ಲಿ ಏಕತೆ ಸಾಧಿಸಿದ್ದರಿಂದ ಅವರ ಅನುಭಾವವು ಮಾನವ ಬದುಕಿಗೆ ಪ್ರೇರಣೆ ನೀಡುತ್ತದಲ್ಲದೆ ಪ್ರಯೋಗಶೀಲತೆಗೆ ಆಹ್ವಾನ ಕೊಡುತ್ತದೆ. ಅವರು ಧಾರ್ಮಿಕ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆಯನ್ನು ಯಾವ ನಿಟ್ಟಿನಿಂದ ಅವಲೋಕಿಸಿದರೂ ಸಂಕುಚಿತ ಧರ್ಮಗಳಾಚೆ ನಿಂತು ಮಾನವೀಯತೆಗೆ ಹೆಚ್ಚಿನ ಮಹತ್ವ ನೀಡಿದ್ದು ಕಂಡುಬರುತ್ತದೆ. ಇದೇ ಅವರ 'ಹೆಚ್ಚುಗಾರಿಕೆ'ಗೆ ತಳಹದಿಯಾಗಿದೆ. ಬಸವಣ್ಣನವರು ಸ್ಥಾಪಿಸಿದ 'ಶೂನ್ಯ ಸಿಂಹಾಸನ' ಒಂದು ಚಿತ್ರಣ ಮನನ ಮಾಡಿಕೊಂಡರೆ ನಮ್ಮ ಮನಸ್ಸು ನಿರ್ಭಯಗೊಳ್ಳುತ್ತದೆ. ನಿಜಾನಂದದಲ್ಲಿ ನೆಲೆಯಾಗಿ ನಿಲ್ಲುತ್ತದೆ.

**ಅಂಗದ ಪ್ರಕೃತಿಯ ಲಿಂಗದಲ್ಲಿ ಅಳಿದು**
**ಮನದ ವಿಕೃತಿಯ ಅರುವಿನಲ್ಲಿ ಅಳಿದು**
**ಜೀವಭ್ರಾಂತಿಯ ನಿಶ್ಚಿಂತ ಪದದಲ್ಲಿ ಅಳಿದು**
**ನಿಶ್ಶೂನ್ಯ ನಿರಾಮಯವಾದ ನಿವಾಸಕ್ಕೆ ಸದಾಚಾರವೆಂಬ ಕೆಸರುಗಲ್ಲನಿಕ್ಕೆ**
**ಸರ್ವಾಚಾರ ಸಂಪತ್ತೆಂಬ ಹೂಗಲ್ಲ ಮುಚ್ಚಿ**
**ಅಂತಃಕರಣ ಚತುಷ್ಟಯವೆಂಬ ನಾಲ್ಕು ಕಂಬಗಳಂ ನಿಲಿಸಿ**
**ಜ್ಞಾತೃವೆಂಬ ಭಿತ್ತಿಯ ಮೇಲೆ ಜ್ಞಾನವೆಂಬ ಶಿಖರಿಯನನುಗೊಳಿಸಿ,**
**ಜ್ಞೇಯವೆಂಬ ಹೊನ್ನ ಕಲಶವಂ ಶೃಂಗಾರಮಂ ಮಾಡಿ,**
**ಬ್ರಹ್ಮರಂಧ್ರದ ಊರ್ಧ್ವದ್ವಾರವೆಂಬ ನಿಜದ್ವಾರಮಂ ಮಾಡಿ,**

**ನಿರ್ವಲಯದಲ್ಲಿ ನೆಲೆಗೊಳಿಸಿ,**
**ಬಸವಪ್ರಿಯ ಕೂಡಲ ಚೆನ್ನಸಂಗಯ್ಯನ ಶರಣ**
**ಪ್ರಭುದೇವರ ಬರವಿಂಗೆ ಶೂನ್ಯಸಿಂಹಾಸನವ ರಚಿಸಿ**
**ಬರವ ಹಾರುತ್ತಿರ್ದನೆನ್ನ ಪರಮಗುರು ಬಸವಣ್ಣನು.**

ಬಸವಾದಿ ಶರಣರು ಕಟ್ಟಬಯಸಿದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಸಮಾಜದಲ್ಲಿ ಕಲ್ಮಶ, ಏರುಪೇರು, ಮೇಲು–ಕೀಳಿನ ಜಂಜಡ–ತಗಾದೆಗಳಿಲ್ಲ. ಅಭಿಪ್ರಾಯ ವ್ಯಕ್ತಪಡಿಸಲು ಅವಕಾಶ ಕಲ್ಪಿಸಿದ ಶ್ರೇಯಸ್ಸು ಬಸವಾದಿ ಶರಣರಿಗೆ ಸಲ್ಲುತ್ತದೆ. ನಿರ್ಭಯದ ಪರಿಸರದಲ್ಲಿ ಹೊರಹೊಮ್ಮಿದ ಅನುಭಾವದ ವಚನಗಳು ತೆರೆದ ಮನಸ್ಸಿನ ಅಮೃತ ಬಿಂದುಗಳಾಗಿವೆ. ಸ್ಥಿರಮನಸ್ಸಿನ ಬಿಚ್ಚುಮಾತುಗಳಾಗಿವೆ. ಸರಳ ನುಡಿಗಳ ಮೂಲಕ ಜನಮಾನಸದ ಮೇಲೆ ಪ್ರಭಾವ ಬೀರಿದ ಬಸವಾದಿ ಶರಣರು ಕನ್ನಡ ನೆಲದಲ್ಲಿ ಶರಣ ಸಂಸ್ಕೃತಿಯೊಂದನ್ನು ಪಸರಿಸಿದುದು ಮಹತ್ವದ ಸಂಗತಿಯಾಗಿದೆ. ಬಸವಣ್ಣನವರು ಜೀವನ ಉದ್ದೇಶವನ್ನು ಎತ್ತಿಹಿಡಿಯುವ ಮೂಲಕ ಇಹದ ಬಾಳಿಗೊಂದು ಅರ್ಥಕಲ್ಪಿಸಿದರು. ಜೀವನದ ಅನುಭಾವವನ್ನು, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸಕಲರು ಅನುಭವಿಸುವಂತೆ ಸಶಕ್ತಗೊಳಿಸಿದ್ದು ಇನ್ನಾವುದೇ ಧಾರ್ಮಿಕ ಕ್ರಾಂತಿಯಲ್ಲಿ ಕಾಣಸಿಗದು. ಮಾನವ ಬದುಕು ಉನ್ನತೀಕರಣಗೊಳಿಸಿದ ಬಸವಣ್ಣನವರ ಕಾರ್ಯಸಿದ್ಧಿಯು ಸಂಸಾರವನ್ನು ಸುಲಭವಾಗಿ ಗೆಲ್ಲುವ ಸೂತ್ರವಾಗಿದೆ.

**ಆದಿ ಬಸವಣ್ಣ ಅನಾದಿ ಲಿಂಗವೆಂಬರು,**
**ಹುಸಿ ಹುಸಿ ಈ ನುಡಿಯ ಕೇಳಲಾಗದು**
**ಆದಿ ಲಿಂಗ ಅನಾದಿ ಬಸವಣ್ಣನು!**
**ಲಿಂಗವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು**
**ಜಂಗಮವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು**
**ಪ್ರಸಾದವು ಬಸವಣ್ಣನನುಕರಿಸಲಾಯಿತ್ತು**
**ಇಂತೀ ತ್ರಿವಿಧಕ್ಕೆ ಬಸವಣ್ಣನೆ ಕಾರಣನೆಂದರಿದೆನಯ್ಯಾ**
**ಕೂಡಲಚನ್ನಸಂಗಮದೇವಾ.**

ಲಿಂಗಾಯತ ಧರ್ಮದ ವಿಶಿಷ್ಟ ದೃಷ್ಟಿ ಮತ್ತು ದಿಕ್ಕನ್ನು ನಿರೂಪಿಸಿರುವ ಜಗತ್ತಿನ ಅವಿರಳ ಜ್ಞಾನಿಗಳಲ್ಲಿಯೇ ಅಪರೂಪವಾಗಿರುವ ಚೆನ್ನಬಸವಣ್ಣನವರು ಬಸವಣ್ಣನೇ ತ್ರಿವಿಧಕ್ಕೆ ಮೂಲನೆಂದು ದೃಢೀಕರಿಸಿದ್ದಾರೆ, ಹೀಗಾಗಿ ಬಸವಣ್ಣನವರ ಬಗ್ಗೆ ತಗಾದೆ ತೆಗೆಯುವ ಅವಸರವಾದಿಗಳಿಗೆ, ಅಪಸ್ವರವಾದಿಗಳಿಗೆ ಕಣ್ಣು ತೆರೆಸುವ ನಿಲುವೇ ಆಗಿದೆ. ಲಿಂಗವಂತ ಧರ್ಮ ಆಚರಣೆಗೆ ಬರುವಂತೆ ವಿವಿಧ ಆಯಾಮ–ಆದ್ಯತೆಗಳನ್ನು ಸೃಷ್ಟಿಸಿರುವ ಶ್ರೇಯಸ್ಸು ಬಸವಣ್ಣನವರಿಗೆ ಸೇರಿದ್ದೆಂಬುದು ಐತಿಹಾಸಿಕ ಸಂಗತಿ.

"ಶೂನ್ಯ ಸಂಪಾದನೆಯ ಪರಾಮರ್ಶೆ" ಗ್ರಂಥದಲ್ಲಿ ಪ್ರೊ. ಸಂ.ಶಿ. ಭೂಸನೂರಮಠ ಅವರು ಬಸವಣ್ಣ ಲಿಂಗಾಯತ ಧರ್ಮದ ಸರ್ವಾಚಾರಿ ಎಂದು ಉಲ್ಲೇಖಿಸಿದ್ದು ಹೀಗಿದೆ: ಉಳಿದ ಆಚಾರ್ಯರಂತೆ ಬಸವಣ್ಣ 'ಪ್ರಸ್ಥಾನತ್ರಯ'ಕ್ಕೆ ಭಾಷ್ಯ ಬರೆಯಲಿಲ್ಲ. ಕೇವಲ ಒಂದು ಮತಕ್ಕೆ ಆಚಾರ್ಯಪುರುಷನೆನಿಸಲಿಲ್ಲ. ಆತನ ದರ್ಶನ 'ಲಿಂಗ, ಜಂಗಮ, ಪ್ರಸಾದ'



ದರ್ಶನ ಬರೆದ ಭಾಷ್ಯ ಆಚಾರ. ಸ್ವಾನುಭಾವದ ಪರಮಸತ್ಯ, ಬಹಿರಂಗದ ಕ್ರಿಯಾಚರಣೆಯಲ್ಲಿ ತುಂಬಿ ಹರಿದರೆ ಅದೇ ಬಸವಣ್ಣ, ಅದೇ ಪ್ರಥಮಾಚಾರಿ, ಅದೇ ಸರ್ವಾಚಾರಿ.

ಶರಣರ ಬಳಗವನ್ನು ಅಸ್ತಿತ್ವಕ್ಕೆ ತಂದ ಶ್ರೇಯಸ್ಸು ಬಸವಣ್ಣನವರದು ಆಗಿದ್ದನ್ನು ಯಾರೂ ಅಲ್ಲಗಳೆಯಲಾಗದು. ಶರಣರ ಜೀವನ ವೃತ್ತಾಂತಗಳಲ್ಲಿ ಬಸವಣ್ಣನವರ ಪ್ರಭಾವವು ಅಚ್ಚೆಯದಂತೆ ಹರವಿಕೊಂಡಿದೆ. ಪ್ರಭುದೇವರು ದಾಖಲಿಸಿದ ಈ ವಚನ ಬಸವಣ್ಣನವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

ಶರಣರ ಬಳಗವನ್ನು ಅಸ್ತಿತ್ವಕ್ಕೆ ತಂದ ಶ್ರೇಯಸ್ಸು ಬಸವಣ್ಣನವರದು ಆಗಿದ್ದನ್ನು ಯರೂ ಅಲ್ಲಗಳೆಯಲಾಗದು. ಶರಣರ ಜೀವನ ವೃತ್ತಾಂತಗಳಲ್ಲಿ ಬಸವಣ್ಣನವರ ಪ್ರಭಾವವು ಅಚ್ಚಳಿಯದಂತೆ ಹರವಿಕೊಂಡಿದೆ. ಪ್ರಭುದೇವರು ದಾಖಲಿಸಿದ ಈ ವಚನ ಬಸವಣ್ಣನವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

**ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆರೆದು,**
**ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು,**
**ತೊಳಗಿ ಬೆಳಗುತ್ತಿದ್ದಿತ್ತಯ್ಯಾ ಶಿವನ ಪ್ರಕಾಶ!**
**ಆ ಬೆಳಗಿನೊಳಗೆ ಒಪ್ಪುತಿರ್ದರಯ್ಯ ಅಸಂಖ್ಯಾತ ಭಕ್ತಗಣಂಗಳು**
**ಶಿವಭಕ್ತರಿರ್ದ ಕ್ಷೇತ್ರವೆ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ?**
**ಶಿವಭಕ್ತರಿರ್ದ ದೇಶ ಪಾವನವೆಂಬುದು ಹುಸಿಯೆ?**
**ಗುಹೇಶ್ವರ ಲಿಂಗದಲ್ಲಿ**
**ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಕಂಡು**
**ಬದುಕಿದೆನು ಕಾಣಾ ಸಿದ್ಧರಾಮಯ್ಯ!**

ಬಸವಣ್ಣನು ತನ್ನ ಪೂರ್ವದೊಳಗಿದ್ದ ಕಂದಾಚಾರ ಮೂಢಾಚಾರ ತಾರತಮ್ಯಗಳನ್ನು ತೊಡೆದುಹಾಕಿ, ಸರ್ವರ ಬಾಳಿಗೆ ಬೆಳಕು ಕೊಟ್ಟಿದ್ದನ್ನೇ ಪ್ರಭುದೇವರು ನಿಚ್ಚಳವಾಗಿ ದಾಖಲಿಸಿದ್ದಾರೆ. ಬಸವಣ್ಣನು ಬೆಳಗಿದ ಬದುಕಿನ ವಿಧಾನದಿಂದಾಗಿ ಗುರುವಾದ, ಸರ್ವ ಜನಾಂಗದ ಏಳ್ಗೆಗೆ ಸರ್ವಕಾಲಿಕ ಗುರುವಾಗಿಯೆ ಉಳಿದರು.

ಜಗತ್ತಿನ ಅವಿರಳ ಜ್ಞಾನದೊಂದಿಗೆ ಬದುಕಿಗೆ ಶೀಲವನ್ನು ಪಸರಿಸಿದ ಬಸವಣ್ಣನವರು ಮಾನವ ಪ್ರೀತಿಯ, ಸಕಲ ಸದ್ಗುಣಗಳ ಸಾಕಾರಮೂರ್ತಿಯಾಗಿದ್ದಾರೆ. ಜೀವ ಜಗತ್ತಿನ ಸಕಲದರಲ್ಲಿಯೂ ದಯೆ ಕಂಡ ಬಸವಣ್ಣನವರು, ದಯೆಯೇ ಧರ್ಮದ ಮೂಲವೆಂದು ಸಾರಿದ್ದು ಸತ್ಯದ ಸಾರವೇ ಆಗಿದೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿರುವ ಮಾನವ ಘನತೆಯನ್ನು ಎತ್ತಿ ಹಿಡಿದು, ಸಕಲರೆಲ್ಲರೂ ಕೂಡಿ ಬಾಳುವ ಜೀವನ ಕಲೆಯನ್ನು ಕರಗತ ಮಾಡಿ ತೋರಿಸಿದ ಬಸವಣ್ಣನವರು, ಜಗದ ಬದುಕಿಗೊಂದು ಅರ್ಥತಂದುಕೊಟ್ಟಿದ್ದು ಇಂದಿನ ಜಾಗತಿಕ ಮಾನವ ಹಕ್ಕುಗಳಾಚೆಯ ನಿಲುವಾಗಿದೆ. ಮಾನವ ಹಕ್ಕುಗಳಿಗಿಂತ ಹೆಚ್ಚಿನ ಹಕ್ಕನ್ನು ಶರಣರು ಪಡೆದಿದ್ದರು. ಇದೇ ಬಸವಧರ್ಮದ ತಳಹದಿಯಾಗಿದೆ.

ಮಾನವನಲ್ಲಿ ಶೀಲ ಸಂವರ್ಧನೆಯ ಶಕ್ತಿಯನ್ನು ಭರಿಸಿದ ಬಸವಣ್ಣನವರ ಪ್ರಭಾವದ ಎತ್ತರವನ್ನು ಮನನ ಮಾಡಿಕೊಳ್ಳಲು ಈ ವಚನವನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದಾಗಿದೆ.

**ಆವ ಕಾಯಕವ ಮಾಡಿದಡೂ ಒಂದೆ ಕಾಯಕವಯ್ಯಾ**
**ಆವಾ ವ್ರತವಾದರು ಒಂದೆ ವ್ರತವಯ್ಯಾ**
**ಆಯ ತಪ್ಪಿದಡೆ ಸಾವಿಲ್ಲ; ವ್ರತ ತಪ್ಪಿದಡೆ ಕೂಡಲಿಲ್ಲ**
**ಕಾಕಪಿಕದಂತೆ ಕೂಡಲು ನಾಯಕನರಕ ಗಂಗೇಶ್ವರ ಲಿಂಗದಲ್ಲಿ.**

ಹಾದರ ಕಾಯಕದ ಮಾರಯ್ಯಗಳ ಪುಣ್ಯ ಸ್ತ್ರೀ ಗಂಗಮ್ಮ ಜಗದೊಳಗಿನ ಆಯಕ್ಕೆ ಸೂತ್ರವೊಂದನ್ನು ನೀಡಿ ಕಾಕಪಿಕದಂತೆ ಕೂಡುವುದು ತರವಲ್ಲೆಂದು ಹೇಳಿದ್ದಾಳೆ. ಸಮಾಜದೊಳಗೆ ಶರಣೆಯಾಗಿ ಹಂಚಿಕೊಂಡಿರುವ ಅನಾಭಾವವು ಭೋಗ ಸಂಸ್ಕೃತಿಯನ್ನು ಅಲ್ಲಗಳೆದು, ಸಂಯಮ, ಸುಶೀಲತೆಗೆ ನಮ್ಮೆಲ್ಲರನ್ನು ಕರೆತರುವಂತಿದೆ. ಬಸವಣ್ಣನವರು ಅಂದಿನ ಜನಜೀವನದ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದರೆಂಬುದಕ್ಕಿಂತಲೂ ಕಾಲಾತೀತ ಜೀವನಮೌಲ್ಯಗಳನ್ನು ರೂಢಿಗತಗೊಳಿಸಿದ್ದರೆಂಬುದು ಮುಖ್ಯವಾಗುತ್ತದೆ. ಈ ವಚನ ಇಂದಿನ ಏಡ್ಸ್ ಮಾರಿಯನ್ನು ತಡೆಗಟ್ಟಬಲ್ಲ ಸೂತ್ರವನ್ನು ಹೊಂದಿರುವುದು ಸಂವೇದವಾಗಿದೆ.

ಮಾನವ ಜೀವನವನ್ನು ಆದರ್ಶಮಯಗೊಳಿಸಿದ ಬಸವಣ್ಣನವರು ಕೂಡಿ ಬಾಳುವ, ಆದರದಿಂದ ಒಪ್ಪಾಗಿ, ಒಗ್ಗೂಡುವಿಕೆಯನ್ನು ಎತ್ತಿಹಿಡಿದರು. ಅನ್ಯೋನ್ಯತೆಯೊಂದಿಗೆ ಅಕ್ಕರತೆಯ ಹೊಳೆಯನ್ನು ಹರಿಸಿದ ಬಸವಣ್ಣನವರು, ಮಾನವನ ಅಂತರಂಗ–ಬಹಿರಂಗ ಶುಚಿಗೊಳಿಸಿದ್ದು ಇಂದಿಗೂ ಸುಖಿಸಮಾಜ ರಚನೆಗೆ ಅಗತ್ಯ ಬಳಸಿಕೊಳ್ಳುವ ಸೂತ್ರವಾಗಿದೆ. ಬಸವಣ್ಣನವರು ಮಾನವೀಯ ಬದುಕಿಗೆ ಪರಿಪಕ್ವತೆಯನ್ನು ತರುವ ಪಥಕ್ಕೊಂದು ದಿಟ್ಟವಾದ ಮಾದರಿಯಾಗಿದ್ದಾರೆ. ಅವರು ಕಟ್ಟಿದ ಸಮಾಜದಲ್ಲಿ ತುಮುಲಗಳಿರಲಿಲ್ಲ.

**ಭಕ್ತಿಯ ಕುಳಸ್ಥಳವ ಮರ್ತ್ಯಲೋಕದಲ್ಲಿ**
**ಹರಹಲೆಂದು ಬಂದನಯ್ಯಾ ಬಸವಣ್ಣನು.**
**ಆಚಾರದ ಶಿವಾಚಾರದ ಮುಂದಣ ಕನ್ನಡಕವ ಕಳೆದು**
**ಕರತಳಾಮಳಕವ ಮಾಡಿದನಯ್ಯಾ ಬಸವಣ್ಣನು**
**ಪರವಾದಿ ಬಿಜ್ಜಳನು ಒರೆಗಲ್ಲ ಹಿಡಿದು**
**ಶಿವಭಕ್ತಿಯ ಸಂಪಾದನೆಯ ಮಾಡುವಲ್ಲಿ,**
**ಮೂವತ್ತಾರು ಕೊಂಡೆಯವ ಪರಿಹರಿಸಿ,**
**ಶಿವಾಚಾರದ ಧ್ವಜವನೆತ್ತಿಸಿದನಯ್ಯಾ ಬಸವಣ್ಣನು.**
**ಕೂಡಲ ಚೆನ್ನಸಂಗಮದೇವರಲ್ಲಿ ಬಸವಣ್ಣನ ನಿಲವ ಹೊಗಳುವರೆ**
**ಎನ್ನಳವಲ್ಲ, ನಿನ್ನಳವಲ್ಲ ಕೇಳಾ ಪ್ರಭುವೆ!**

ಜಗತ್ತಿನ ಮಹಾಮಹಿಮರ ಹಿತೋಪದೇಶ, ಕಾರ್ಯ, ನಿಲುವು–ಒಲವು, ಅವರು ಕಟ್ಟಬಯಸಿದ ಸಮಾಜ, ಗಳಿಸಲು ಯತ್ನಿಸಿದ್ದ ಅಂತಿಮ ಗುರಿಗಳತ್ತ ಗಮನಹರಿಸಿದಾಗ ಬಸವಣ್ಣನವರಷ್ಟು ಪರಿಪಕ್ವ ವ್ಯಕ್ತಿತ್ವ 'ಅಪೂರ್ವ ಮನುಷ್ಯ' ಮತ್ತು ಜೀವಪರ ಮೌಲ್ಯಗಳ ಸಾಕಾರ ಸಿಗುವುದು ವಿರಳವೇ ಆಗಿದೆ. ಬಸವಣ್ಣನವರು ಕೇವಲ ಧಾರ್ಮಿಕ ಕ್ಷೇತ್ರಕ್ಕೆ ಮಾತ್ರ ಸೀಮಿತರಾಗದೆ, ಮನುಷ್ಯ ಬದುಕಿನ ಒಳಿತಿನ ಕೇಂದ್ರವಾಗಿ ಬೆಳಗಿದ್ದಾರೆ. ಅವರನ್ನು ಮಹಾಮಾನವ, ಮಹಾನುಭಾವ ಎಂದು ಜಗತ್ತು ಇಂದಿಗೂ ಮಾನ್ಯತೆ ಮಾಡಿದೆ.



ಜಗತ್ತಿನ ಜೀವನವನ್ನು ಸರಳಗೊಳಿಸಿರುವ ಬಸವಣ್ಣನವರ ಮೇರುವ್ಯಕ್ತಿತ್ವವನ್ನು ಮೆಚ್ಚಿ ಸಂಶೋಧಕ ಡಾ. ಎಂ. ಚಿದಾನಂದಮೂರ್ತಿಯವರು ಹೇಳಿರುವ ಈ ಮಾತುಗಳು ಗಮನಾರ್ಹವಾಗಿವೆ. "ಬಸವಣ್ಣ ಹಲವು ಮುಖಗಳುಳ್ಳ ವ್ಯಕ್ತಿತ್ವದ ಅಪೂರ್ವ ಮನುಷ್ಯ, ದೈವಭಕ್ತ, ಭಂಡಾರಿ, ಸಾಮಾಜಿಕ ಆಂದೋಲನಕಾರ, ಮಾನವತಾವಾದಿ, ಸಾಹಿತಿ ಇವುಗಳೆಲ್ಲ ಅವನಲ್ಲಿ ಮೇಳೈಸಿ ಅವರನ್ನು ಕರ್ನಾಟಕದ, ಅಷ್ಟೇ ಏಕೆ ಭಾರತ ಇತಿಹಾಸದಲ್ಲಿ ಚಿರಸ್ಥಾಯಿಗೊಳಿಸಿವೆ". ಅಂದಿನ ನಾಗರಿಕ ಜಗತ್ತಿನ ತೀವ್ರ ಮಹತ್ವಾಕಾಂಕ್ಷೆಯ ವ್ಯಕ್ತಿ.

ಅಂತರಂಗ ಸಾಧನೆ, ತನ್ನ ಸುತ್ತಲಿನ ಸಮಾಜ ಎರಡನ್ನೂ ನಡೆಸುವ ನಿಷ್ಠೆ ಅವನದು. ಹೀಗಾಗಿ ಅವನಲ್ಲಿ ವೇದನೆ, ಕೋಪ, ತಾಪ, ಛಲ, ಸಂತೋಷ, ಆನಂದ, ಉದ್ವೇಗ, ನಿರಾಸೆ, ಹತಾಶೆ, ವಿನಯ, ಉದ್ದಟತನ, ಚಾಂಚಲ್ಯ, ಹಠ, ಏಳು–ಬೀಳು, ತೃಪ್ತಿ, ಪರಕೀಯತೆ ಎಲ್ಲ ರಾಗಭಾವಗಳನ್ನು ಅಲ್ಲಿ ಕಾಣುತ್ತೇವೆ. ಅವನ ವಚನಗಳು ಮನುಷ್ಯನ ಚಿತ್ತಸ್ಥಿತಿಯ ವಿವಿಧ ಮುಖಗಳ ಪ್ರದರ್ಶನ ಶಾಲೆ. ತೀವ್ರ ಸಂವೇದನಾಶೀಲನಾದ ಅವನಿಗೆ ವಚನ ರಚನೆ ಎಷ್ಟೋ ವೇಳೆ ಅನಿವಾರ್ಯ ಕ್ರಿಯೆಯಾಗಿದ್ದಿತ್ತು. ವಚನಕಾರರಲ್ಲಿ ಇಷ್ಟು ಭಾವುಕನಾದ ಮುಕ್ತ ಮನಸ್ಸಿನ ವ್ಯಕ್ತಿ ಮತ್ತೊಬ್ಬರಿಲ್ಲೆಂದು ಜಗತ್ತು ಗುರುತಿಸಿದೆ ಎನ್ನಿಸಿಬಿಡುತ್ತದೆ. ಒಂದು ಆಂದೋಲನದ ನಾಯಕನಾಗಿ, ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಮನ್ವಂತರಕ್ಕೆ ಕಾರಣಕರ್ತನಾದ ಬಸವಣ್ಣ ನಿಜವಾದ ಅರ್ಥದಲ್ಲಿ ಒಬ್ಬ 'ಪವಾಡ ಪುರುಷ'ನೇ ಸರಿ.

ಬಸವಣ್ಣನವರನ್ನು ಜಗತ್ತಿನ ಮಹಾಮಹಿಮರೊಂದಿಗೆ ಹೋಲಿಸಿ ನೋಡುವ ಹಂಬಲವು ಬಲವತ್ತರಗೊಂಡಾಗ ಈ ಹುಡುಕಾಟದ ದಾರಿಯಲ್ಲಿ ದೊರೆಯುವವರು ವಿರಳವೆಂದು ಹೇಳಬಹುದು. ಬಹುಶಃ ಇಂಥ ವ್ಯಕ್ತಿತ್ವದ ವ್ಯಾಪ್ತಿ ಮತ್ತು ವಿಶಾಲತೆ ಹೊಂದಿರುವ ಹೋಲಿಕೆಗೆ ದೊರೆಯುವ ಬಸವಣ್ಣನಿಗೆ, ಬಸವಣ್ಣನೇ ಆಗಿರುತ್ತಾನೆಂದರೆ ಅತಿಶಯೋಕ್ತಿಯಾಗಲಾರದು. ಬಸವಣ್ಣನವರು ನಡೆದು–ನುಡಿದು ಹರಿಸಿದ ರಸಾನುಭವ, ಅನುಭಾವ, ಮೌಲ್ಯ, ತರತಮದ ಜಿಜ್ಞಾಸೆ ಎಲ್ಲವೂ ಮನುಷ್ಯ–ಮನುಷ್ಯರನ್ನು ಒಂದಾಗಿಸುವ ಬಗೆಯಾಗಿದೆ. ಬಸವಣ್ಣನವರ ಬದುಕಿನ ಅನುಭಾವ ಬಾಳಿಗೊಂದು ದಿವ್ಯಾನುಭೂತಿಯ ಬುತ್ತಿಯಾಗಿದೆ. ಚೆನ್ನಬಸವಣ್ಣನವರು ಹೇಳುವಂತೆ ಬಸವಣ್ಣನವರು ಉಪಮಾತೀತರಾಗಿದ್ದಾರೆ. ಸಮಷ್ಟಿಯ ಸರ್ವೋದಯದ ಪ್ರತೀಕವಾಗಿ ಪ್ರಸಿದ್ಧಿಯಾಗಿದ್ದಾರೆ.

**ತನು ಗುರುವಿನಲ್ಲಿ ಸವೆದು,**
**ಮನ ಲಿಂಗದಲ್ಲಿ ಸವೆದು,**
**ಧನ ಜಂಗಮದಲ್ಲಿ ಸವೆದು,**
**ತನುವೆ ಗುರುವಾಗಿ,**
**ಮನವೆ ಲಿಂಗವಾಗಿ**
**ಧನವೆ ಜಂಗಮವಾಗಿ**
**ಇಂತೀ ತ್ರಿವಿಧ ಐಕ್ಯವಾಗಿ ನಿಮ್ಮಲ್ಲಿ ನಿಂದನಾಗಿ,**
**ಕಾಯವಿಡಿದು ಕರ್ಮವಿರಹಿತನಾದ,**
**ಕೂಡಲಚನ್ನಸಂಗಮ ದೇವರಲ್ಲಿ**
**ಸಂಗನ ಬಸವಣ್ಣನು ಉಪಮಾತೀತನಾಗಿರ್ದನು.**

ಭ್ರಮೆಗೊಂಡ ಲೋಕಕ್ಕಿಂದು ಬಸವಣ್ಣ ಮಾನವನ ಜೀವನದ ನಿಜವನರುಹಿದ ರೀತಿಯು ಸಹಜತೆಯೇ ಆಗಿದೆ. ಬಾಳಿನ ಮರ್ಮವನ್ನು ಸಕಲರು ಅರಿತುಕೊಳ್ಳುವ 'ವಚನ'ಗಳನ್ನು ನೀಡಿ ಸಕಲರಿಗೂ ಬದುಕು ನಿಲುಕುವಂತೆ ಮಾಡಿದ್ದು ಬಸವಣ್ಣನವರಿಗೆ ಸಲ್ಲುತ್ತದೆ. ಇದು ಮನುಷ್ಯನಿಂದ, ಮನುಷ್ಯನಿಗಾಗಿ, ಮನುಷ್ಯತ್ವದಿಂದ ಹೊರಹೊಮ್ಮಿದ ಸಹಜ-ಸರಳತೆಯೊಳಗೆ ಪರಿಪಕ್ವ ಧಾರ್ಮಿಕತೆಯೇ ಆಗಿದೆ. ಶರಣರ ಒಂದೊಂದು ವಚನಗಳು, ಜೀವನ ಕಟ್ಟುವ ಜೀವಹನಿಗಳಾಗಿವೆ, ಜ್ಯೋತಿಗಳಾಗಿವೆ.

**ತನುವ ಗೆಲ್ಲರಿಯದೆ, ಮನವ ಗೆಲ್ಲಲರಿಯದೆ**
**ಧನವ ಗೆಲ್ಲಲರಿಯದೆ, ಭ್ರಮೆಗೊಂಡಿತ್ತು ಲೋಕವೆಲ್ಲವು**
**ತನುವ ದಾಸೋಹಕ್ಕೆ ಸವೆಸಿ**
**ಮನವ ಲಿಂಗಧ್ಯಾನದಲ್ಲಿ ಸವೆಸಿ**
**ಧನವ ಜಂಗಮದಲ್ಲಿ ಸವೆಸಿ ಗೆಲ್ಲಬಲ್ಲಡೆ**
**ಸಂಗನ ಬಸವಣ್ಣನಲ್ಲದೆ ಮತ್ತಾರನು ಕಾಣೆ,**
**ಗುಹೇಶ್ವರಾ ನಿಮ್ಮ ಶರಣ ಸಂಗನ ಬಸವಣ್ಣಂಗೆ**
**ನಮೋ ನಮೋ ಎನುತಿರ್ದೆನು.**

ಬಸವಣ್ಣನವರ ಜೀವನ ಗೆಲುವಿಗೊಂದು ನೆಲೆಯಾಗಿದೆ. ಬಸವಣ್ಣನವರು ಧಾರ್ಮಿಕ ಕಗ್ಗಂಟನ್ನು ಸಹಜ-ಸರಳತೆಯೊಳಗೆ ಬಿಡಿಸಿದ ಧೀರರಲ್ಲದೆ, ಸಕಲರೂ ಧಾರ್ಮಿಕತೆ ಗಳಿಸಿಕೊಳ್ಳುವ ಸೂತ್ರವನ್ನು ಜಗತ್ತಿಗೆ ತೆರೆದ ಕ್ರಾಂತಿಪುರುಷರಾಗಿರುವುದು ವಿಶೇಷವಾಗಿದೆ. ಮುಟ್ಟಬೇಡಿ, ದೂರ, ದೂರ, ನಿಲ್ಲಿ, ಅಲ್ಲೇ ನಿಮ್ಮ ಸ್ಥಾನವೆಂದು, ಹೀಗಳಿಸಿಕೊಂಡ ಜನರೇ ಧಾರ್ಮಿಕ ತುತ್ತತುದಿಯ ಮಾತು-ಮೌನಗಳನ್ನು ಗಳಿಸಿಕೊಂಡು ಅರಿವಿನ ಬದುಕಿಗೆ ಬಸವಣ್ಣನೇ ನಾಯಕನೆಂದು ಗುರುತಿಸಿದ್ದು ಹೆಮ್ಮೆಯ ಸಂಗತಿಯಾಗಿದೆ. ಈ ನೆಲೆಯಲ್ಲಿ ಇಂದಿನ ಸಂದರ್ಭದಲ್ಲಿ ಬಸವಣ್ಣನವರಿಗೆ ಅರಿತು ಗೌರವ ಕೊಡುವಷ್ಟು, ಲಿಂಗವಂತ ಸಮಾಜ ವಿಶಾಲಗೊಳ್ಳಬೇಕಾದ ಅಗತ್ಯವಿದೆ. ಬಸವಣ್ಣನವರ ನಿಲುವು ಜಗದ ಜೀವನವನ್ನು ಸುಲಭವಾಗಿ ಗೆಲ್ಲುವಂತಹದೆಂದು ಹೇಳಿರುವ ಪ್ರಭುದೇವರು, ಬಸವಣ್ಣನವರ ಅರ್ಪಣಾ ಮನೋಧರ್ಮವನ್ನು ಮೆಚ್ಚಿಕೊಂಡಿದ್ದು ಸಹಜವೇ ಆಗಿದೆ.

ಬಸವಣ್ಣನವರು, ಮನುಕುಲವನ್ನು ಸತ್ಯದ ಪಥದೊಳಗೆ ನಡೆಸಿಕೊಂಡು ಹೋದದ್ದು ಒಂದು ಸಮೂಹ ಕ್ರಾಂತಿಯ ಪ್ರತೀಕವಾಗಿದೆ. ಹೀಗಾಗಿ ಇಂದಿನ ಸಮಸ್ಯೆಗಳು, ಕೊರತೆಗಳು, ಸ್ಪರ್ಧೆಗಳು, ಪೈಪೋಟಿಗಳು ಸತ್ಯದತ್ತ ಸಾಗಬೇಕಾಗಿದ್ದರಿಂದ ಸಕಲರೂ ಅಣ್ಣ ಬಸವಣ್ಣನ ಪಥದೊಳಗೆ ನಡೆದುಕೊಂಡು ಹೋಗುವುದು ಅಗತ್ಯವೆಂದು ಭಾವಿಸಿಕೊಂಡದ್ದು ಸಹಜವೇ ಆಗಿದೆ. ಮಾನವನ ಬದುಕಿನ ಸಾಧ್ಯತೆಗಳನ್ನು ಸಮಾನತೆಗೆ ಬಳಸಿಕೊಂಡವರಲ್ಲಿ ಬಸವಣ್ಣರು ಪ್ರಥಮರಾಗಿದ್ದಾರೆ. ಹೀಗಾಗಿ ನಾವೆಲ್ಲರೂ ಬಸವಣ್ಣನವರ ಸಮಾನತೆಗೆ ಕ್ರಿಯಾಶೀಲರಾಗಿ ಬದುಕಬೇಕಿದೆ.

●





# ಅಕ್ಕನ ವಚನಗಳ ನಿರ್ವಚನ

**ಬಿದರಹಳ್ಳಿ ನರಸಿಂಹಮೂರ್ತಿ**
*'ಅನಿಮಿಷ', ಕ್ರಾಸ್-7, ದುರ್ಗಿಗುಡಿ*
*ಹಂತ 1, ಹೊನ್ನಾಳಿ - 577 217*
*ದಾವಣಗೆರೆ ಜಿಲ್ಲೆ*
*98801 30203*

**ಕಟಿಹಾದ ಬಿದಿರಿನಲ್ಲಿ ಮರಳಿ ಕಳಲೆ ಮೂಡಬಲ್ಲುದೆ?**
**ಸುಟ್ಟ ಮಡಕೆ ಮುನ್ನಿನಂತೆ ಮರಳಿ ಧರೆಯನಪ್ಪಬಲ್ಲುದೆ?**
**ತೊಟ್ಟು ಬಿಟ್ಟು ಬಿದ್ದ ಹಣ್ಣು ಮರಳಿ ತೊಟ್ಟನಪ್ಪಬಲ್ಲುದೆ?**
**ಕಷ್ಟಕರ್ಮಿ ಮನುಜರುಕಾಣದೆಒಂದ ನುಡಿದಡೆ,**
**ನಿಷ್ಠೆಯುಳ್ಳ ಶರಣರು ಮರಳಿ ಮರ್ತ್ಯಕ್ಕೆ ಬಪ್ಪರೆಚೆನ್ನಮಲ್ಲಿಕಾರ್ಜುನಾ?**

*(ವ.೧೧೧, ಪು.೩೨, ಶಿವಶರಣೆಯರ ವಚನಸಂಪುಟ, ಸ.ವ.ಸಂ.೫, ಸಂ:ಡಾ.ವೀ.ರಾ, ೧೯೯೩)*

ಸಂಸಾರಹೇಯಸ್ಥಲ ಸೂಚಕವಚನವಲ್ಲವೆಇದು? ವೀರವಿರಕ್ತಿಗೆ ತೋರುಬೆರಳಾದ ಮೂರು ಮಹತ್ವದ ರೂಪಕಗಳಿವೆ ಇಲ್ಲಿ. ಜೀವನ್ಮುಕ್ತಿಗೆ ದಾಟಿಕೊಂಡ ಸಾಧಕ ಆತ್ಮಗಳು ಹೊರಜಗದ ಬರಿಗಣ್ಣುಗಳಿಗೆ ವಿಕಾರವಾಗಿ ಕಂಡರೂ ಒಳಗಿಂದೊಳಗೆ ಪ್ರವೃತ್ತಿರಹಿತ ನಿರುಮ್ಮಳ ನಿವೃತ್ತಸುಖದ ನಿರ್ಮಲಾನಂದ ಸ್ಥಿತಿಯಲ್ಲಿ ಓಲಾಡುತ್ತಿರುತ್ತವೆ. ಇಂಥ ದೃಷ್ಟಾಂತರೂಪಿ ಬೀಜವಾಕ್ಯಗಳ ಚರ್ವಿತ ಚರ್ವಣ ಬಳಸುತ್ತ ಮತಪಂಥಗಳು ಸಮತೆ ಸಹನೆ ಶಾಂತಿ ಸಂಯಮ ತ್ಯಾಗ ವೈರಾಗ್ಯ ವಿರಕ್ತಿ ಮುಕ್ತಿ ಜೀವನ್ಮುಕ್ತಿ ಮೋಕ್ಷ ಶೂನ್ಯ ಬಯಲು ಬಿಡುಗಡೆ ನಿರ್ವಾಣದಂತ ಮೌಲ್ಯ ಬೋಧಿಸುತ್ತ ಬಂದಿರುವುದನ್ನ ಭಾರತ ಉಪಖಂಡದ ಧಾರ್ಮಿಕ ಚರಿತ್ರೆ ಎತ್ತಿತೋರಿಸತ್ತೆ.

ಶ್ರೀಶೈಲದ ಕದಳಿವನಹೊಕ್ಕ ಅಕ್ಕ ತಾ ನಡೆದುಹೋದ ಅನುಭಾವ ಪಥದ ಪುನರಾವಲೋಕನ ಮಾಡಿ ಹಾಡಿಕೊಂಡ ನುಡಿಯಲ್ಲವೆ ಇದು? ಒಂಟಿ ಬೆತ್ತಲೆ ಅಬಲೆ ಯಾಕೀ ಕಗ್ಗಾಡಲ್ಲಿ ಅಂಡಲೆಯುತ್ತಿ? ಹೋಗವ್ವ ಹುಟ್ಟು ಮನೆ ಅಥವ ಕೊಟ್ಟ ಮನೆ ಸೇರಿಕೊಳ್ಳವ್ವಾ ಎಂದ್ಯಾರೋ ಹಿತೈಷಿ ಇಷ್ಟಬಂಧುಗಳು ಬುದ್ಧಿ ಹೇಳಿದರೆ? ತಾವೇನೂ ಸಾಧಿಸಿ ಕಿಸಿಯಲಾಗದಿದ್ದರೂ, ನಿಜ ಸಾಧಕರ ಕಂಡು ಹಸಿ ಹೊಟ್ಟೆಕಿಚ್ಚುಪಡುತ್ತ ಸದಾ ಬರಿ ಕಾಯಕಷ್ಟದಲ್ಲೆ ಬಿದ್ದಿರುವ ಕರ್ಮಿ ಜೀವಿಗಳ ಹಂಗಣೆಗೆ ಪ್ರತಿಕ್ರಿಯೆಯಾಗಿ ಹುಟ್ಟಿತೆ ಈ ವಚನ? ನಾಕನೆ ಸಾಲ 'ಕಾಣದೆ'ಶಬ್ದ ನಿಜಸಂಗತಿ ಕಣ್ಣಾರೆ ನೋಡದೆ, ಒಳಸತ್ಯವನ್ನೂ ಅರಿಯದೆ\ಮನಗಾಣದೆ ಎಂಬೆರಡೂ ಅರ್ಥಕ್ಕೆ ಪಕ್ಕಾಗತ್ತೆ. ಕರ್ಮಘಾತಕ ಕೌಶಿಕ ಕೀಟಲೆಗಾರ

ಕಿನ್ನರ ಅಕ್ಕ ಹಿಂತಿರುಗಿ ಬರಲೆಂಬ ಲೌಕಿಕ ಹಂಬಲಿಕೆಯಿಂದಲೊ, ಅವಳ ಯೋಗಕ್ಷೇಮ ಕಾಳಜಿಯಿಂದಲೊ ಅಥವ ತಮ್ಮ ಕುಕೃತ್ಯಗಳಿಗೆ ಕ್ಷಮೆಯಾಚಿಸಲೆಂದೊ ಶ್ರೀ ಗಿರಿಗೂ ಹೋಗಿ ಭೇಟಿ ಮಾಡಿದರೆಂಬ ಪ್ರತೀತಿಯಿದೆ. ಅವರಿಗವಳ ಪರೋಕ್ಷ ಉತ್ತರವೆ ಈ ವಚನ? ದುಸ್ತರ ಸಾಧನೆಗೈದು ಇಷ್ಟದೈವದ ಕೃಪಾಸಿದ್ಧಿಗಳಿಸಿದ ಪುಣ್ಯವಂತ ಶರಣೆ\ ಶರಣರು ಮತ್ತೆ ಹಿಂದಿನ ಅಪರಿಪಕ್ವಸ್ಥಿತಿಗೆ, ಸಾಂಸಾರಿಕ ಜಂಜಡಕ್ಕೆ ಮರಳಲಾರರು ಎಂಬುದಕ್ಕೆ ಎರಡು ಪ್ರಾಕೃತಿಕ ಮತ್ತು ಒಂದು ಸಾಂಸ್ಕೃತಿಕ ದೃಷ್ಟಾಂತವಿದೆ ಇಲ್ಲಿ. ಕಟಿಹಾದ ಬಿದಿರು, ತೊಟ್ಟು ಕಳಚಿ ಬಿದ್ದಹಣ್ಣು ಅನಾದಿ ಪ್ರಾಕೃತಿಕ ದೃಷ್ಟಾಂತಗಳಷ್ಟೆ? ಸುಟ್ಟ ಮಡಕೆ ಮಾತ್ರ ಸುಧಾರಿತ ಬದುಕಲು ಕಲಿತ ಕಾಯಕನಿಷ್ಠ ಸಮಾಜದ ಉಪಯುಕ್ತ ವಸ್ತು ರೂಪಿ ಸಾಂಸ್ಕೃತಿಕ ಉದಾಹರಣೆ. ತೊಟ್ಟು ಕಳಚಿದ ಹಣ್ಣು, ಕಟಿಹಾದ ಬಿದಿರು, ಸುಟ್ಟಮಡಕೆ ಇವು ಮೂರೂ ಲೌಕಿಕ ನೆಲೆಯಲ್ಲಿ ತಿರುಗಿ ತಮ್ಮ ಮೂಲಭೌತ ಸ್ಥಿತಿಗೆ ಮರಳಲಾರವು; ಅಲೌಕಿಕ ನೆಲೆಯಲ್ಲಿ ಸೃಷ್ಟಿಚಕ್ರಕ್ಕೆ ಲೋಕಲಾಲಸೆಗೆ ಸಿಕ್ಕಿಬೀಳವು. ಕಟಿಹಾದ ಅಂದರೆ ಎಳೆ ಸುಳಿಸುಟ್ಟೊ, ಒಣಗಿ ಕಟಕಲಾಗಿ ಸೀಳಿಯೊ, ಬಗ್ಗಲಾರದಂತೆ ಬಲಿತು ಬಿದಿರಕ್ಕಿಸುರಿದೊ ನಿರುಪಯುಕ್ತವಾದದ್ದು ಎಂಬನೇಕ ಅರ್ಥ ಛಾಯೆಗಳಿವೆ. ಬಿದಿರು ಮೆಳೆ ಎಳೆ ಸುಳಿಯಲ್ಲಷ್ಟೆ ಕಳಲೆ ಎಂಬ ನಸು ಹಸಿರು ತಿಳಿಹಳದಿ ಚೂಪು ಚಿಗುರೊಡೆಯಬಲ್ಲದು. ಇಂದಿಗೂ ಎಳೆಬಿದಿರ ಸುಳಿಚಿಗುರು ಕಳಲೆ ಉಪ್ಪಿನಕಾಯಿ ಹಾಕುತ್ತಾರೆ ಮಲೆನಾಡಿಗರು. ಅದರ ರುಚಿ ಬಲ್ಲವರೆ ಬಲ್ಲರು. ಬೇಯಿಸಿದ ಕಳಲೆ ಪಲ್ಯ ಮುಂತಾದ ಖಾದ್ಯಗಳಾಗಿ ವಿನಿಯೋಗವಾಗತ್ತೆ. ಆದರೆ ಕಟಿಹಾದ ಬಿದಿರು ತನ್ನ ಪೂರ್ಣಾಯುಷ್ಯ ಬದುಕಿಬಾಳಿ ಬಿದ್ದು ಮಣ್ಣಾಗಲು ಸಿದ್ಧವಾಗಿದೆ. ಅದಕ್ಕೆ ಮತ್ತೆ ಕಳಲೆ ತಳೆವ ಗರಜುಗೈರತ್ತಿಲ್ಲ. ಹಾಗೆಯೆ ಮರದಲ್ಲೆ ತೂಗಿ ಪೂರ್ಣ ಮಾಗಿ ತಾನಾಗಿ ತೊಟ್ಟು ಬಿಟ್ಟುಬಿದ್ದ ಹಣ್ಣ ಶಿವ ತನಗೆ ಬೇಕೆಂದು ಎತ್ತಿಕೊಂಡ ಎಂಬರ್ಥದ ವಚನ ಶಿವನ ಪಾದ ಸೇರಿದವರ ಕುರಿತು ಪದೇಪದೆ ಉದ್ಧೃತವಾಗುವುದ ಕಾಣುತ್ತೇವೆ. ಗಿಡದಲ್ಲೆ ಹಣ್ಣಾದ ಪಕ್ವಫಲದ ಅದ್ಭುತ ದೈವಿಕ ರುಚಿ, ಕಾಯಲ್ಲೆ ಕಿತ್ತೊತ್ತೆ ಹಾಕಿ ಉಬ್ಬುಗುಚ್ಚಿಸುವ ಅವಸರಗಡುಕ ಆಧುನಿಕ ನಾಗರಿಕತೆಯ ಕೃತಕ ಬಣ್ಣದ ಹಣ್ಣಿಗೆಲ್ಲಿಂದ ಬಂದೀತು? ಕೃತ್ರಿಮ ನಾಗರಿಕತೆಗೆ ನಿಸರ್ಗದ ಸಹಜ ಸ್ವಾದ ಒಗ್ಗದು, ಅರ್ಥವಾಗದು. ತಾನಾಗೇ ತೊಟ್ಟು ಬಿಟ್ಟು ಬಿದ್ದ ಹಣ್ಣು ಪ್ರಸಾದವಾಗಲು ಸಮರ್ಪಿತವಾಗಿಬಿಟ್ಟಿದೆ. ಆ ಹಣ್ಣಿಗೆ ಮರಳಿ ಮರವೇರುವ ಹಂಬಲವಿರದು. ಇನ್ನು ಹಸಿಮಣ್ಣ ಮೃದುತ್ವ ನಾದಿಸಿ ಕೊಳ್ವ(ಫ್ಲೆಕ್ಸಿಬಲ್) ಗುಣ ಸುಟ್ಟಮಡಕೆಗೆಂದೂ ಬರಲಾರದು. ಸುಟ್ಟಮಡಕೆ ಆ ತರಲತೆಯಿಂದ ಪಾರಾಗಿ ಗಟ್ಟಿಗೊಂಡಿದೆ. ಇರೋತನಕ ನೀರು ಹೊರುವ ಹೊಣೆ ಹೊತ್ತು ಕಡೆಗೆ ಸಣ್ಣಗೆ ತಾಗಿದರೂ ಒಡೆದು ಚೂರು ಚೂರಾಗಿ ಇಲ್ಲವಾಗಲು ಸಿದ್ಧವಾಗಿಯೆ ತಯಾರಾಗಿದೆ. ಅದಕ್ಕೆ ಮರಳಿ ಸ್ನಿಗ್ಧ ಹಸಿಮಣ್ಣಾಗುವ ಆಸೆ ಬಯಕೆ ಇಲ್ಲ. ಹೆಚ್ಚೆಂದರೆ ಸುಟ್ಟಮಡಕೆಯ ಒಡೆದ ಚೂರುಗಳು ಆವೆ ಮಣ್ಣ ಮುದ್ರೆ ಮೂರ್ತಿ ಆಟಿಕೆಗಳು ಕಾಲಾತೀತವಾಗಿ ಭೂಗತವಾಗಿದ್ದು ಅದ್ಭುತ ಲಭ್ಯಗಳಂತೆ ಪ್ರಾಚ್ಯ ವಿದ್ಯಾ ಸಂಶೋಧಕರ ಕಣ್ಣಿಗೆ ಕೈಗೆ ಬಿದ್ದು ಸರಸ್ವತಿ ಕೊಳ್ಳದ ಸಂಸ್ಕೃತಿ, ಸಿಂಧು ತೀರದ ಪಶುಪತಿ ಸಂಸ್ಕೃತಿ ಕಾಲಘಟ್ಟದ ವಾಸ್ತವ ಚರಿತ್ರೆಯ(?) ಪರಿಕಲ್ಪನೆ ಕಟ್ಟಿಕೊಡಲು ಸಹಾಯಕವಾದಾವಷ್ಟೆ. ಅವನ್ನೆಲ್ಲ ಬಳಸಿದ ಜನರ



ಸಾಮಾಜಿಕ ರೀತಿ ನೀತಿ ಸಾಂಸ್ಕೃತಿಕ ಕನಸು ಆಧ್ಯಾತ್ಮಿಕ ಸಾಧನೆ ಬಗ್ಗೆ ಅರೆಬರೆ ಮಾಹಿತಿಯಿತ್ತಾವಷ್ಟೆ. ಆದರೆ ಯಾರೂ ಆ ಸುಟ್ಟಮಣ್ಣ ಚೂರುಗಳ ತಿರುಗಿ ಮೂಲ ಮಣ್ಣಾಗಿಸಿ ಹಸಿಮಣ್ಣೊಳಗೆ ಹುದುಗಿಸಿ ಒಂದಾಗಿಸಿ ಮಿದ್ದಲಾರರು.

'ನಿಷ್ಠೆಯುಳ್ಳ ಶರಣರು ಮರಳಿ ಮರ್ತ್ಯಕ್ಕೆ ಬಪ್ಪರೆ' ಎಂಬಲ್ಲಿ ಎರಡರ್ಥದ ಧ್ವನಿಯಿದೆ. ಯಾರೊ ಕರೆದರೆಂದು ಮತ್ತೆ ಹುಟ್ಟುಮನೆ\ಕೊಟ್ಟಮನೆ ಸಾಂಸಾರಿಕ ಬದುಕಿಗೆ ಮರಳುವರಲ್ಲ ಎಂಬುದು ಲೌಕಿಕ ಅರ್ಥ. ಭವಗೆದ್ದು ಹೋದ ನಿಸ್ಸೀಮ ಶರಣೆ ಶರಣರು ತಿರುತಿರುಗಿ ಹುಟ್ಟು ಸಾವಿನ ಜೀವನ ಚಕ್ರದ ತಿರುಗಣಿಗೆ ಸಿಕ್ಕಿಬೀಳಲ್ಲ ಎಂಬುದು ಆಧ್ಯಾತ್ಮಿಕ ಅರ್ಥ. ಒಟ್ಟಿನಲ್ಲಿ ಇಲ್ಲಿ ನೀಡಲಾದ ದೃಷ್ಟಾಂತಗಳ ಮಾದರಿಯಲ್ಲಿ ಸಾಧನಾ ಪಥದಲ್ಲಿ ಸಾಗಿ ಅನುಭಾವ ಸಿದ್ಧಿಗಳಿಸಿದ ಶರಣ ಜೀವಕ್ಕೆ ಮರಳಿ ಲೋಕಸಂಸಾರದ ಹೊದಕುಳಿಯಲ್ಲಿ ಬೀಳುವ ಗೀಳಿರುವುದಿಲ್ಲ. ಮತ್ತೆ ಭವಬಂಧನಕ್ಕೆ ಸಿಲುಕುವ ಹಪಾಹಪಿ ಇರುವುದಿಲ್ಲ. ಯಾಕೆಂದರೆ ಅದರ ಲೌಕಿಕ ಭೌತಿಕ ದೈಹಿಕ ಮಾನಸಿಕ ಅಗತ್ಯ ಕಾಮನೆಗಳೆಲ್ಲ ಸುಟ್ಟುಭಸ್ಮವಾಗಿರುತ್ತವೆ. ಅಂಥ ಶರಣಜೀವಕ್ಕೆ ಪುನಃ ಮರ್ತ್ಯಲೋಕದ ವಾಂಛೆಗಳಿಗೆ ಮರಳುವಂತೆ ಹೇಳುವುದು ಬುದ್ಧಿಗೇಡಿಗಳ ಕೆಲಸವೆ ಸರಿ. ಅಂಥ ಯಾವ ಸಲಹೆ ಸೂಚನೆಯನ್ನೂ ಸ್ವೀಕರಿಸುವ ಮಟ್ಟದಲ್ಲಿರದು ಶರಣಜೀವ. ಅದಕ್ಕೆ ಬೇಕಾದ್ದೊಂದೆ: ಉಭಯವಳಿದು ಅಭಯನಲ್ಲಿ ಒಂದಾಗುವ ಅಂತಿಮ ಸುಖಾನುಭಾವ. ಆದರೆ ಸ್ವಂತಮುಕ್ತಿ ಧಿಕ್ಕರಿಸಿದ ಕೆಲವು ಅಪರೂಪದ ಶರಣ ವೈಷ್ಣವ ಸೂಫಿ ಸಂತರು ತಮ್ಮ ಸಮಾಧಿಯಲ್ಲಡಗಿ ಗುಪ್ತಶಕ್ತಿ ಮೂಲಕವೆ ಸಮುದಾಯಗಳ ಸಲಹುವ ವಿಶಿಷ್ಟ ಮೇಲ್ಪಂಕ್ತಿ ಹಾಕಿಟ್ಟಿದ್ದಾರೆ.

ಇದೇ ರೀತಿ ಆಧ್ಯಾತ್ಮಿಕ ವಲಯದಲ್ಲಿ ಮತ್ತೆ ಹುಟ್ಟದಂತೆ ಹುರಿದ ಬೀಜದ ಮಾತು ಕೇಳಿಬರತ್ತೆ. ಅದೂ ಸಂಸಾರ ಚಕ್ರದಿಂದ ಬಿಡುಗಡೆ ಹೊಂದಿದವರ, ಭವಸಾಗರದಿಂದ ಪಾರಾದವರ ಮನಸ್ಥಿತಿಗೆ ರೂಪಕವಾಗಿ ಬಳಕೆಯಾಗತ್ತೆ. ಹೀಗೆ ಎಲ್ಲ ಧರ್ಮಗಳೂ ತಂತಮ್ಮ ತತ್ವಕ್ಕೆ ಲಗತ್ತಾಗೊ ಉದಾಹರಣೆ ಹೆಣೆದು ಹಣಿದು ಅಲೌಕಿಕ ಮೌಲ್ಯಗಳ ಪ್ರತಿಪಾದಿಸುತ್ತವೆ. ದೇವರಲ್ಲೆ ಸೇರಿಹೋಗುವ ಪರಿಕಲ್ಪನೆ ಕಟ್ಟಿಕೊಡತ್ತೆ ಶೈವರ ಶಿವೈಕ್ಯ. ವೈಷ್ಣವರ ವಿಷ್ಣುಸಾಯುಜ್ಯ ಸಾವಿನಾಚೆಯ ಅನುಭವವನ್ನು ಪೌರಾಣಿಕ ಭೂಪಟ ಹಾಸಿ ವರ್ಣಿಸುತ್ತದೆ. ಅಕ್ಕ ಅಲ್ಲಮ ಬಸವಣ್ಣನಂತ ಶರಣಾನುಭಾವಿಗಳು ಬಯಲಲ್ಲೆ ಬೆರೆವ, ಘನಶೂನ್ಯದಲ್ಲೆ ಲಯವಾಗುವ ಅನೂಹ್ಯಾನುಭವ ಕಣ್ಣಿಗೆಕಟ್ಟಿಸಿ ನಮ್ಮಾತ್ಮಗಳ ಪುಳಕಿತಗೊಳಿಸುತ್ತಾರೆ. ಅಧ್ಯಾತ್ಮ ಅನುಭಾವ ಎಂದರೆ ಯಾವುದೆ ಸ್ಥಾಪಿತ ಮತಧರ್ಮದ ಚೌಕಟ್ಟಿನ ವಿಧಿ ನಿಷೇಧಗಳ ಕರ್ಮಾಚರಣೆ ಮೊತ್ತವಲ್ಲ. ಬದಲಿಗೆ ಮತಾತೀತ ತೌಲನಿಕ ತಾತ್ವಿಕಚಿಂತನೆ ಸ್ವಂತ ಅನುಭವವಾಗುವ ಯೋಗಾ ಯೋಗ. ಜೀವ ಕುಲಕ್ಕೆಲ್ಲ ಸಮಾನವಾದ ಹುಟ್ಟು-ಬದುಕು-ಸಾವಿನ ಆಚೀಚೆಯ ಒಟ್ಟರ್ಥ ಒಟ್ಟಂದವ ಮತದೆಲ್ಲೆ ಮೀರಿ ಧರ್ಮದ ಗಡಿ ದಾಟಿ ಪರಿಭಾವಿಸುವುದೆ ನಿಜವಾದ ಅಧ್ಯಾತ್ಮ, ಅಸಲಿ ಅನುಭಾವ. ವೇದಗಳ ಆಧಾರದ ಮೇಲೆ ಜಾತಿವ್ಯವಸ್ಥೆ ನಿಂತಿದೆಯೆಂಬುದೆ ಅಪ್ಪಟ ಅಸತ್ಯ. ಅದೇ ರೀತಿ ವಚನಗಳ ತಳಹದಿ ಮೇಲೂ ಒಂದು ಮತೀಯ ಜಾತಿ ಕಟ್ಟಿ ನಿಲ್ಲಿಸಲು ಸುತರಾಂ ಸಾಧ್ಯವಿಲ್ಲ. ವಚನಗಳು ವೇದೋಪನಿಷತ್ತು ಇಡಿ ವಿಶ್ವದ ಸ್ವತ್ತು. ಅವು ಯಾವುದೇ ಹಿತಾಸಕ್ತಿ ಗುಂಪಿನ ಸ್ವಂತಾಸ್ತಿಯಲ್ಲ.

ಶೈವ ವೀರಶೈವ ವೈಷ್ಣವ ಶ್ರೀವೈಷ್ಣವ ಬೌದ್ಧ ಜೈನ ಸಿಖ್ ಸೇರಿದಂತೆ ಭಾರತ ಉಪಖಂಡ (ಸಬ್ಕಾಂಟಿನೆಂಟ್)ದಲ್ಲಿ ಮೈತಳೆದ ಮತಧರ್ಮಗಳೆಲ್ಲ ವೇದ ಪರಿಷ್ಕರಣೆ, ಪ್ರತಿಪಾದನೆ, ಪ್ರತಿಕ್ರಿಯೆ, ಪ್ರತಿಭಟನೆ, ನಿರಾಕರಣೆ, ತಿದ್ದುಪಡಿ, ಶುದ್ಧೀಕರಣ, ಸಮನ್ವಯದ ಉದ್ದೇಶ ಹೊತ್ತು ಹಬ್ಬಿಹರಡಿದ ಶಾಖೆಗಳೆ ಹೊರತು ಖಂಡಿತ ಪ್ರತ್ಯೇಕ ಸ್ವತಂತ್ರ ಧರ್ಮಗಳಲ್ಲ. ಆರ್ಥಿಕ ಲಾಭ, ಸಾಮಾಜಿಕ ಸೌಲಭ್ಯ, ರಾಜಕೀಯ ಸವಲತ್ತುಗಳಿಗಾಗಿ ಪ್ರತ್ಯೇಕತೆ ಬಾವುಟ ಹಾರಿಸುವುದು ಧಾರ್ಮಿಕ ಚಿಂತನೆಯಾಗದು, ಆಧ್ಯಾತ್ಮಿಕ ಪರಿಹಾರವಾಗದು, ಅನುಭಾವ ರಹಸ್ಯವೆನಿಸದು. ಹೀಗೆಲ್ಲ ಆಧುನಿಕ ಯುಗದ ಆಗು ಹೋಗಿಗೂ ಪ್ರತಿಸ್ಪಂದಿಸಿ ಇಂದಿನವರ ವೈಚಾರಿಕತೆಯನ್ನೂ ಪ್ರತಿಫಲಿಸುವ ಅಕ್ಕನವಚನಗಳು ಕನ್ನಡಿಗರ ಪಾಲಿನ ಅಪೂರ್ವ ಮಾಯ ಗನ್ನಡಿಯಲ್ಲವೆ? ಅಮಾಯಕ ಅರಿವಿನ ನಾವೆಯೇರಿದ ಪಿಪಾಸುಗಳೆಲ್ಲರ ಧ್ರುವತಾರೆಯಲ್ಲವೆ?

●

**ಮಾತಿನ ಹಂಗೇತಕ್ಕೆ ಮನವೇಕಾಂತದಲ್ಲಿ ನಿಂದ ಬಳಿಕ**
**ಬಸವಯ್ಯಾ**
**ಅಜಾತನ ಒಲುವೆ ಏತಕ್ಕೆ ಅರ್ಪಿತದ ಹಂಗ ಹರಿದ ಬಳಿಕ**
**ಬಸವಯ್ಯಾ**
**ಎನಗೆ ಸಮಯಾಚಾರವಿನ್ನೇಕೆ ಭಕ್ತಿಭಾವ ನಷ್ಟವಾದ ಬಳಿಕ**
**ಬಸವಯ್ಯಾ**
**ಮಾತಿನ ಸೂತಕ ಹಿಂಗಿ ಮನೋಲೀಯವಾಯಿತ್ತಯ್ಯಾ**
**ಸಂಗಯ್ಯಾ**
**ಬಸವ ಕುರುಹಿಲ್ಲದ ಮೂರ್ತಿಯಾದ ಕಾರಣ**





# ಸಕಲದರೋಳ್ ದಾಸೋಹಂಭಾವ

**ವೆಂಕಟೇಶ ಕೆ. ಜನಾದ್ರಿ**
*ಲೆಕ್ಕಪತ್ರ ಅಧೀಕ್ಷಕ, ಕಕರಸಾ.ಸಂಸ್ಥೆ*
*ಕಲಬುರ್ಗಿ ವಿಭಾಗ-2, ಕಲಬುರ್ಗಿ-585102*
*ಮೊ: 9945330492*

ಕಲ್ಯಾಣದ ಹೆಬ್ಬಾಗಿಲು ಕಲಬುರ್ಗಿ ಎಂದಾಕ್ಷಣ ಥಟ್ಟನೇ ನೆನಪಾಗುವುದು ಶರಣಬಸವೇಶ್ವರರು. ಹೌದು, ಜಗತ್ತಿನಲ್ಲಿ ಗುರು-ಶಿಷ್ಯರು ಒಂದೇ ಸ್ಥಳದಲ್ಲಿ, ಒಂದೇ ದೇವಾಲಯದಲ್ಲಿ ಅಷ್ಟೇ ಏಕೆ ಗುರುಶಿಷ್ಯರೊಬ್ಬರೊಳಗೊಂದಾಗಿ ಪೂಜೆಗೊಳ್ಳುತ್ತಿರುವುದು ಕಲಬುರ್ಗಿಯಲ್ಲಿ ಬಹಳ ವಿಶೇಷತೆ. ಬಸವಾದಿ ಶರಣರ ಪರಿಕಲ್ಪನೆಯ ಕಾಯಕ ಮತ್ತು ದಾಸೋಹ ಸೂತ್ರಗಳಡಿಯಲ್ಲಿಯೇ ಕಲಬುರ್ಗಿಯ ಶರಣಬಸವೇಶ್ವರ ದಾಸೋಹ ಪೀಠದಲ್ಲಿ ಪೂಜೆಗೊಳ್ಳುತ್ತಿರುವ ಗುರು ಶರಣಬಸವೇಶ್ವರರು ಮತ್ತು ಅವರಾಪ್ತ ಶಿಷ್ಯರಾದ ಆದಿದೊಡ್ಡಪ್ಪನವರು. ಈರ್ವರ ನಿಲುವು ಸರ್ವದರಲಿ, ಸಕಲದರೋಳ್ ದಾಸೋಹಂಭಾವ ಇರಬೇಕೆನ್ನುವ ಏಕೈಕ ನಡೆಯಾಗಿತ್ತು. ಈ ನಡೆಯು ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ನಡೆದ ನಡೆಯ ಪಥದ ಮುಂದಿನ ಪ್ರಾಯೋಗಿಕ ಹೆಜ್ಜೆಗಳಾಗಿದ್ದವು.

ಶರಣಬಸವೇಶ್ವರರು ಮೂಲತಃ ಕಲಬುರ್ಗಿ ಜಿಲ್ಲೆಯ ಅರಳಗುಂಡಿಗಿಯಲ್ಲಿ ಕ್ರಿ.ಶ. ೧೭೪೬ರಲ್ಲಿ ಪುಷ್ಯಮಾಸದ ಸೋಮವಾರ ಶರಣ ಆದಯ್ಯ ಮತ್ತು ಶರಣೆ ಸಂಗಮ್ಮನವರ ಮಗುವಾಗಿ ಜನಿಸುತ್ತಾರೆ. ಆ ಮನೆ 'ಬೇಡು' ಎನ್ನುವ ಬದಲಿಗೆ 'ಕೊಡು'ಎಂಬ ಶರಣರ ದಾಸೋಹ ಸಂಸ್ಕೃತಿಯನ್ನೇ ಮೈಗೂಡಿಸಿಕೊಂಡ ಮನೆತನವಾಗಿತ್ತು. ಶರಣಬಸವರು ಪತ್ನಿ ಮಹಾದೇವಿ ಜೊತೆ ಒಕ್ಕಲುತನದ ಕಾಯಕದೊಂದಿಗೆ ಜೀವಿನವಿಡಿ ದಾಸೋಹವನ್ನೇ ಮೈಗೂಡಿಸಿಕೊಂಡವರಾಗಿದ್ದರು. ಕಲಕೇರಿಯ ಮರುಳಸಿದ್ಧ ದೇವರಿಂದ ಲಿಂಗದೀಕ್ಷೆ ಪಡೆಯುತ್ತಾರೆ. ಗುರು-ಶಿವತತ್ವ-ಶಿವಧರ್ಮ-ಶರಣತ್ವಗಳ ಸಾಧನೆಯ ಗುರಿ ಏನು? ಎಂದು ಗುರುಗಳೊಮ್ಮೆ ಕೇಳಿದಾಗ, "ಸತ್ಯದಲ್ಲಿದ್ದು ಕರುಣಾದೃಷ್ಟಿ, ಪರಹಿತಾಸಕ್ತಿಯಿಂದ ಇಷ್ಟಲಿಂಗದ ಮೂಲಕ ನನ್ನೊಳಗಿರುವ ಶಿವನನ್ನು ಪೂಜಿಸಿಕೊಳ್ಳುವುದೇ ಶಿವತತ್ವವಾಗಿದೆ. ಪರಧರ್ಮ ನಿಂದನೆ ಮಾಡದಿರುವುದು, ಪರಮತಿಯರ ಜೊತೆ ಸ್ನೇಹ ಸೌಹಾರ್ದತೆಯಿಂದಿರುವುದೇ ಶಿವಧರ್ಮವಾಗಿದೆ. ಮನವೆಂಬ ಮಂಗವನ್ನಿಡಿದಿಟ್ಟುಕೊಳ್ಳುವ ಮೂಲಕ ಸರಳ ಬದುಕನ್ನು ಮೈಗೂಡಿಸಿಕೊಳ್ಳುವುದೇ ಶರಣತ್ವವಾಗಿದೆ. ಇವುಗಳ ಸಾಧನೆಯಿಂದ ಅಂತರಾತ್ಮ ಶುದ್ಧವಾಗುತ್ತದೆ" ಎಂದು ಉತ್ತರಿಸಿದ ಪರಿಗೆ ಗುರುಗಳೇ ಆಶ್ಚರ್ಯಚಕಿತರಾಗಿ ಈತ ಮುಂದೆ ಶರಣನಾಗುತ್ತಾನೆ, ಬಸವಾದಿ ಶರಣರ ಕಾಯಕ ಮತ್ತು ದಾಸೋಹ ಪರಿಕಲ್ಪನೆಗೆ

ತನ್ನ ನಡೆಯ ಮೂಲಕವೇ ಹೆಚ್ಚಿನ ಮಹತ್ವ ತರುತ್ತಾನೆಂದು ಆಶೀರ್ವದಿಸುತ್ತಾರೆ. ಇಂಥ ಗುರುಗಳ ಮಾರ್ಗದರ್ಶನದಿಂದ ಮತ್ತು ತಮ್ಮೊಳಗಿನ ಅರಿವೆಂಬ ಜ್ಞಾನದ ಬಲದಿಂದ ಬಸವಣ್ಣನವರ ತತ್ವದಂತೆ ಸಕಲ ಜೀವಿಗಳಿಗೆ ನೀರು, ಕಾಳುಗಳನ್ನು ಪ್ರೀತಿ ತುಂಬಿದ ಕಾಳಜಿಯಿಂದ ದಾಸೋಹ ಮಾಡಿ ಅಂತರಂಗದಲ್ಲಿ ಶುದ್ಧಿ ಮೈಗೂಡಿಸಿಕೊಂಡು ಬಹಿರಂಗದಲ್ಲಿ ಜಂಗಮರಾಗುತ್ತಾರೆ. ಒಡಲುಗೊಂಡವರಳಲು ಏನೆಂಬುದರ ಬಗೆಯೇ ಸದಾ ಚಿಂತಿತರಾದವರು. ಕೇವಲ ಮನುಷ್ಯರಷ್ಟೇ ಅಲ್ಲ ಸಕಲ ಪಶು, ಪಕ್ಷಿ, ಪ್ರಾಣಿಗಳ ಹಸಿವಿನ ಸಂಕಟವನ್ನು ತಮ್ಮ ಹಸಿವೆಂದೇ ಸಂಕಟಪಡುವ, ಅವುಗಳ ತಲ್ಲಣಗಳೇ ತಮ್ಮ ತಲ್ಲಣವೆಂದು ಮಿಡಿಯುವ ಶರಣತ್ವ ಹೃದಯ, ದಾಸೋಹಂಭಾವದ ಮನ ಇವರದ್ದು.

ಶರಣತ್ವದಲ್ಲಿ ಬದುಕುವ ಸರಳಿಗರಿಗೆ ಯಾವುದರ ಮೇಲೂ ವ್ಯಾಮೋಹ ಇರಲಾರದೆಂಬುದುಕ್ಕೆ ಪ್ರತ್ಯಕ್ಷ ಸಾಕ್ಷಿಯೊಂದು ಇವರ ಬದುಕಿನಲ್ಲಿ ನಡೆಯುತ್ತದೆ. ಒಂದೊಮ್ಮೆ ಇವರ ಕಿರಿಯ ಸಹೋದರ ದೊಡ್ಡಪ್ಪ ಆಸ್ತಿಯ ವಿಷಯದಲ್ಲಿ ಪಾಲನ್ನು ನೀಡಲು ಶರಣಬಸವರಿಗೆ ಕೇಳುತ್ತಾನೆ. ಇರುವ ಎಲ್ಲಾ ಆಸ್ತಿಯನ್ನು ನೀನೇ ತೆಗೆದುಕೋ. ಮಹಾಮನೆಯಾಗಿರುವುದನ್ನು ಒಡೆದು, ಮುರಿದ ಮನೆಯನ್ನಾಗಿಸುವುದು ಬೇಡ. ಮನಸ್ಸು ಮುದುರಿಸಿಕೊಳ್ಳುವುದು ಬೇಡ. ಆದರೆ ದಾಸೋಹ ಸೇವೆ ನಿರಂತರವಾಗಿರಲೆನ್ನುತ್ತಾರೆ. ತಮಗೇನನ್ನೂ ಬೇಡವೆಂದರೂ ದೊಡ್ಡಪ್ಪ ನೀಡಿದ ಒಣ ಭೂಮಿ ಕರಕಿ ಹೊಲವನ್ನು ಮಾತ್ರ ಪಡೆದು ಅದರಲ್ಲಿಯೇ ಬೆಳೆ ಬೆಳೆಯುವ ಕಾಯಕ ಕೈಕೊಳ್ಳುತ್ತಾರೆ. ಅಲ್ಲಿಯೂ ಅಷ್ಟೇ ಕರಕಿ ಭೂಮಿಯಲ್ಲಿ ಅಷ್ಟಿಷ್ಟು ಬೆಳೆದ ತೆನೆಗಳಲ್ಲಿಯ ಕಾಳುಗಳನ್ನು ಪಕ್ಷಿಗಳು ಹಾಯಾಗಿ ತಿನ್ನಲೆಂಬ ಸದ್ಭಾವ ಜೊತೆಗೆ ಪಕ್ಷಿಗಳಿಗೆ ಕುಡಿಯಲು ನೀರಿನ ವ್ಯವಸ್ಥೆಯನ್ನೂ ಮಾಡುತ್ತಾರೆ. ತಮ್ಮ ಹೊಲಕ್ಕೆ ಬೇಲಿ ಹಾಕದೇ ಸಕಲ ಪ್ರಾಣಿ ಪಕ್ಷಿಗಳಿಗೂ ಅಲ್ಲಿಯ ಬೆಳೆಯನ್ನು ದಾಸೋಹವಾಗಿಸುತ್ತಾರೆ. ಉಳಿದುದನ್ನು ತಮ್ಮ ಪ್ರಸಾದವಾಗಿಸಿಕೊಳ್ಳುತ್ತಾರೆ. "ನೀನೊಲಿದರೆ ಕೊರಡು ಕೊನರುವುದಯ್ಯ" ಎಂಬ ಶರಣ ವಾಣಿಯಂತೆ ಒಣಭೂಮಿಯಾದ ಕರಕಿ ಹೊಲದಲ್ಲಿಯೇ ಶರಣಬಸವರು ಇಷ್ಟೆಲ್ಲ ಸಂತೃಪ್ತಿ ಹೊಂದಿದ ಕಾರಣಕ್ಕೆ ಸಹೋದರ ದೊಡ್ಡಪ್ಪನಿಗೆ ಮನ ಪರಿವರ್ತನೆಯಾಗಿ ತಾನೂ ಅಣ್ಣನಂತೆಯೇ ಆದರ್ಶವಾಗಿ ಬದುಕಬೇಕೆಂದುಕೊಳ್ಳುತ್ತಾನೆ. ತಮ್ಮ ನಡೆಯಿಂದಲೇ ಇತರರನ್ನು ಪರಿವರ್ತಿಸುವ ಈ ಗುಣವೂ ಸಹ ಶರಣಬಸವರ ದಾಸೋಹ ತತ್ವ. ದಾಸೋಹವೆಂದರೆ ಕೇವಲ ಅನ್ನ ಜ್ಞಾನಗಳನ್ನಷ್ಟೇ ದಾಸೋಹಿಸುವದಲ್ಲ. ಸರ್ವದರೊಳ್ ದಾಸೋಹಂಭಾವವಿದ್ದಾಗ ಅಂಥಹವರ ಬದುಕೇ ದಾಸೋಹದ ಬದುಕಾಗಿರುತ್ತದೆ ಎಂಬುದಕ್ಕೆ ಶರಣಬಸವೇಶ್ವರರು ತಮ್ಮನ್ನೇ ದಾಸೋಹಿಸಿಕೊಂಡಿರುವ ವಿವಿಧ ಪರಿ ನಮಗೆ ವಿಭಿನ್ನವಾಗಿ ತೋರುತ್ತದೆ. ದಾಸೋಹದ ಕ್ಷಿತಿಜ ಮತ್ತದರ ವ್ಯಾಪ್ತಿ ಮತ್ತಷ್ಟು ಹಿಗ್ಗುತ್ತಿರುವುದನ್ನು ಅವರ ನಡೆಯಲ್ಲಿ ನಾನು ಕಂಡುಕೊಂಡಿರುವೆ.

ಶರಣಬಸವರ ಬದುಕಿನಲ್ಲಿ ಹಲವಾರು ವಿಸ್ಮಯಗಳಾಗುತ್ತವೆ. ಕೆಲವರು ಅವು ಪವಾಡವೆನ್ನುತ್ತಾರೆ. ಪವಾಡಗಳನ್ನು ನಾನು ನಂಬುವುದಿಲ್ಲ. ಒಂದರ್ಥದಲ್ಲಿ ಅವು ಪವಾಡಗಳಾಗಿದ್ದರೂ ಅವುಗಳ ಅಂತರಾರ್ಥ ಇನ್ನೇನೋ ಇರುತ್ತದೆ. ಆ ಘಟನೆಗಳ



ಮೂಲಕ ಒಂದಿಷ್ಟು ವಿಚಾರಗಳು ಜಂಗಮವಾಗುತ್ತಿರುತ್ತವೆ ಅವೆಲ್ಲ ದಾಸೋಹದ ಮತ್ತೊಂದು ಬಗೆ ಎಂಬುದು ನನ್ನ ತಿಳುವಳಿಕೆ. ಅವುಗಳಲ್ಲಿ ಕೆಲವು ಹೀಗಿವೆ, ಒಂದೊಮ್ಮೆ ಬೇಡನೊಬ್ಬ ಶರಣಬಸವರನ್ನು ಕೊಲ್ಲಲು ಬಂದು ತನ್ನ ಕತ್ತಿ ಬೀಸಿದಾಗಲೆಲ್ಲ ಅದು ಹೂಮಾಲೆಯಾಗುತ್ತದೆ. ಆತನ ವ್ಯರ್ಥ ಶ್ರಮವನ್ನು ಕಂಡು ಮರುಗಿ ಕ್ಷಮಿಸುತ್ತಾರೆ. ಒಂದೊಮ್ಮೆ ಜಂಗಮನ ಮಗನ ಮದುವೆ ಸಲುವಾಗಿ ಸಾಲ ತಂದು ತೀರಿಸಲಾಗದಿದ್ದಾಗ ಆ ಶಿವನೇ ಆ ಸಾಲ ತೀರಿಸುತ್ತಾನೆ. ಕಲ್ಬುರ್ಗಿಗೆ ಬರುವಾಗ ಕಂಬಳಿಯನ್ನು ಹಾಸಿ ರಾಮಾಜಿ ಜೊತೆ ಭೀಮಾ ನದಿ ದಾಟಿದ್ದು. ನಂತರ ಕೋಬಾಳ, ಬಸವಕಲ್ಯಾಣ, ಅವರಾದಿ, ಬೆಳಗುಂಪಿ, ಪರ್ವತಾಬಾದ್‌ಗೆ ಬಂದು ಅಲ್ಲಿ ದಾಸೋಹ ಕಾಯಕ ಕೈಕೊಂಡಿದ್ದು ಅಲ್ಲಿಂದ ಕಲ್ಬುರ್ಗಿಗೆ ಬಂದು ದೊಡ್ಡಪ್ಪಗೌಡರಲ್ಲಿಯೇ ಉಳಿದುಕೊಳ್ಳುತ್ತಾರೆ. ಕಲ್ಬುರ್ಗಿಯಲ್ಲಿ ಅನೇಕ ಬಗೆಯಲ್ಲಿ ಪರೋಪಕಾರದ ಕಾಯಕ ಮಾಡುತ್ತಾರೆ. ಭಸ್ಮ ಲೇಪನದಿಂದ ಭೂತ ನಿವಾರಣೆ, ಬ್ರಹ್ಮಪುರದ ದೇಶಮುಖರ ಪತ್ನಿಯ ರೋಗ ನಿವಾರಿಸಿ ಮಗುವನ್ನು ಕರುಣಿಸಿದ್ದು, ಬ್ರಾಹ್ಮಣನೊಬ್ಬ ಮೃತನಾದಾಗ ಆತನ ಪತ್ನಿಯ ಸಂಕಟ ನೋಡದೇ ಸತ್ತವನನ್ನು ಬದುಕಿಸಿದ್ದು, ಅಂಧನಿಗೆ ಕಣ್ಣು ಕರುಣಿಸಿದ್ದು, ಕೇವಲ ಸೇರು ಅಕ್ಕಿಯಿಂದ ಎಷ್ಟೋ ಜನರಿಗೆ ದಾಸೋಹ ಮಾಡಿದ್ದು, ಮಾನಿನಿಯ ಮಾನಭಂಗಕ್ಕೆ ಕಾರಣನಾದ ಕಾಮುಕನಿಗೆ ಷಂಡತ್ವ ಪ್ರಾಪ್ತವಾಗಿಸಿದ್ದು.,..ಹೀಗೆ ಅನೇಕ ಆಶ್ಚರ್ಯಕರ ರೀತಿಯಲ್ಲಿ ಪವಾಡ ಸದೃಶ್ಯಗಳಿಗೆ ಕಾರಣರಾಗುತ್ತಾರೆ. ಈ ಘಟಕಗಳ ಹಿಂದಿರುವುದೆಲ್ಲ ಅಜ್ಞಾನವನ್ನು ಮತ್ತು ಮೌಢ್ಯತೆಯನ್ನು ಕಳೆದು ಅರಿವಿನ ಜ್ಞಾನವನ್ನು ದಾಸೋಹಿಸುವುದಾಗಿರುತ್ತದೆ. ಇವೆಲ್ಲ ಶರಣಬಸವೇಶ್ವರರ ಬದುಕಿನಲ್ಲಿ ನಡೆದ ದಾಸೋಹದ ವಿವಿಧ ಬಗೆಗೆಳು.

ನಾನು ಈಗಾಗಲೇ ಹೇಳಿದಂತೆ, ಈ ಪವಾಡಗಳ ಸತ್ಯಾಸತ್ಯತೆ, ವಾಸ್ತವಿಕತೆ ಮತ್ತು ವೈಜ್ಞಾನಿಕತೆಯನ್ನು ಯೋಚಿಸುವುದಕ್ಕಿಂತ ಇವುಗಳ ಹಿಂದನ ವೈಚಾರಿಕತೆಯನ್ನು ಅವುಗಳ ಮೂಲ, ಸಮಾಜಕ್ಕೆ ಏನೋ ತಿಳಿಸಬೇಕಾಗಿರುವ ಅವರ ತವಕವನ್ನು ಅವಲೋಕಿಸಬೇಕಾಗಿದೆ. ಕೊಲ್ಲಲು ಬಂದವನ ಕತ್ತಿ ಹೂಮಾಲೆಯಾಗುವುದೆಂದರೆ ಬುದ್ಧ ಅಂಗೂಲಿಮಾಲಾನನ್ನು ಬದಲಿಸಿದಂತೆ ಎಂಥ ಕ್ರೂರಿಯೇ ಆಗಿರಲಿ ಪ್ರೀತಿಯಿಂದ ವರ್ತಿಸಿದಾಗ ಆತ ಪರಿವರ್ತಿತನಾಗಬಹುದು. ಮಾಡಿದ ಸಾಲ ಶಿವ ತೀರಿಸುವುದೆಂದರೆ ಈ ವ್ಯವಹಾರಿಕ ಪ್ರಪಂಚದಲ್ಲಿ ನಡೆಯುವ ಎಲ್ಲದಕ್ಕೂ ಸಾಮಾನ್ಯ ಮನುಷ್ಯ ಕಾರಣವಲ್ಲ ಎಲ್ಲವೂ ಆ ಭಗವಂತನಿಗೆ ಸಂಬಂಧಿಸಿದ್ದಾಗಿದೆಯಾದ ಕಾರಣ ಸಾಲ ಕೊಡಲು ಮತ್ತು ತೀರಿಸಲು ಆತನೇ ಅಂತಿಮವೆಂಬ ಭಾವವಿಲ್ಲಿದೆ. ಮನದಲ್ಲಿ ಆತ್ಮ ಸ್ಥೈರ್ಯವಿದ್ದರೆ ಸತ್ತವನನ್ನು ಬದುಕಿಸಲಾಗದಿದ್ದರೂ ಸತ್ತಂತಿರುವವರನ್ನು ಎಚ್ಚರಿಸಿರಬಹುದಾಗಿದೆ. ಸತ್ತ ವ್ಯಕ್ತಿ ವಾಸ್ತವವಾಗಿ ಸತ್ತಂತಿರುವ ನಿಷ್ಕ್ರಿಯನಾಗಿರಬಹುದು. ಅವನನ್ನು ತಮ್ಮ ಮಾತಿನ ಮೂಲಕ ಸ್ಪರ್ಷದ ಮೂಲಕ ಕ್ರಿಯಾಶೀಲನನ್ನಾಗಿಸಿರಬಹುದು. ಹಾಗೆಯೇ ಕಾಮುಕನಿಗೆ ಗಲ್ಲು ಶಿಕ್ಷೆಯನ್ನು ವಿಧಿಸುತ್ತಿರುವ ಇಂದಿನ ಶಿಕ್ಷಾ ಪದ್ದತಿ ಎಲ್ಲೆಡೆ ಚರ್ಚಿತ ವಿಷಯವಾಗಿದೆ. ಇಲ್ಲಿ ಶರಣಬಸವರು ಅವನಿಗೆ ಷಂಡತ್ವದ ಶಿಕ್ಷೆ ವಿಧಿಸಿದ್ದು ಒಂದರ್ಥದಲ್ಲಿ ಆತ ತನ್ನ ತಪ್ಪನ್ನು ತಿದ್ದಿಕೊಂಡು ಹೊಸದಾಗಿ ಬದುಕಲೊಂದು ಅವಕಾಶ ಸಿಗುತ್ತದೆ. ಇಲ್ಲಿ ಷಂಡತ್ವವೆನ್ನುವುದು ಅವನಲ್ಲಿ

ಭಯವನ್ನು ಬಿಂಬಿಸುತ್ತದೆ. ಕುರುಡನಿಗೆ ಕಣ್ಣು ಬರಿಸಿದ್ದೆಂದರೆ ಕಣ್ಣಿದ್ದು ಕುರುಡನಂತಿರುವವರೊಳಗಿನ ಅರಿವಿನ ಕಣ್ಣನ್ನು ತೆರೆಸಿರಬಹುದು. ಭೂತ ನಿವಾರಣೆಯೆಂದರೆ ಮನದೊಳಗಿನ ಮಾನಸಿಕ ಭಯ/ಅಸ್ವಸ್ಥತೆಯನ್ನು ತಮ್ಮ ಸಾಂತ್ವನದ ಮಾತಿನಿಂದ ಸಾಂಕೇತಿಕವಾಗಿ ಭಸ್ಮ ಸವರಿ ನಿವಾರಿಸಿರಬಹುದು. ಸತಿಪತಿಗಳಲ್ಲಿ ಯಾವುದೋ ವಿಷಯಕ್ಕೆ ಉದ್ಭವಿಸಿದ ವಿರಸದ ಕಾರಣಕ್ಕಾಗಿ ಮಕ್ಕಳಾಗಿಲ್ಲದಿರಬಹುದು. ಇಂಥ ಮಕ್ಕಳಾಗದಿದ್ದ ದಂಪತಿಗಳ ಮಧ್ಯ ಪ್ರೀತಿಯ ಮಮತೆಗೆರೆದು ಸತಿಪತಿಗಳನ್ನೊಂದು ಮಾಡಿ ಅವರಿಗೆ ಮಕ್ಕಳ ಭಾಗ್ಯ ಕರುಣಿಸಿರಬಹುದು. ಕೇವಲ ಸೇರು ಅಕ್ಕಿಯಲ್ಲಿ ಸಾಕಷ್ಟು ಜನರಿಗೆ ದಾಸೋಹ ಹೇಗೆ ಸಾಧ್ಯವೆಂದು ಯೋಚಿಸಿದಾಗ ಪ್ರೀತಿಯಿಂದ ಏನೇ ಕೊಟ್ಟರೂ ಅದು ಇಮ್ಮಡಿ ನೂರ್ಮಡಿಯಾಗಿ ಸಂತೃಪ್ತಿಗೊಳಿಸುತ್ತದೆ. ಪ್ರೀತಿ ಮತ್ತು ಮಮತೆಗಳು ಕೊಟ್ಟಷ್ಟು ಬೆಳೆಯುತ್ತವೆ ಎಂಬುದಕ್ಕೆ ಇದು ಸಾಕ್ಷಿ. ಹೀಗೆ ಅವರ ಎಲ್ಲಾ ಬಗೆಯ ಪವಾಡಗಳನ್ನು ಹೀಗೆಲ್ಲಾ ವಿಶ್ಲೇಷಿಸಿದಾಗ ಅಲ್ಲಿರುವುದು ಕೇವಲ ದಾಸೋಹಂಭಾವದ ಪರಿಶುದ್ಧ ನಡೆಯಾಗಿರುತ್ತದೆ. ಈ ದಾಸೋಹಗಳೆಲ್ಲವೂ ಸಹ ಅವರು ಸ್ವತಃ ಪ್ರಯತ್ನಿಸಿದ ಕಾಯಕದಿಂದಾಗಿದ್ದೆಂಬುದನ್ನು ಅರಿಯಬೇಕಿದೆ. ಹಾಗಾಗಿ ಸ್ವಯಂ ಕಾಯಕದಿಂದ ಮಾಡಿದ ದಾಸೋಹದಲ್ಲಿ ದೊರೆಯುವುದು ಸತ್ಪಾತ್ರಕ್ಕೆ ಸಲ್ಲಿಕೆಯಾದ ಪ್ರಸಾದವೆಂಬ ನಿಲುವು ಬಸವಾದಿ ಶರಣರದ್ದಾಗಿತ್ತು. ಅದೇ ಮಾದರಿಯಲ್ಲಿ ಶರಣಬಸವೇಶ್ವರರ ಬದುಕು ಸೋಹಂ ಆಗದೇ, ಶಿವೋಹಂ ಆಗದೇ ದಾಸೋಹಂ ಆಗಿರುತ್ತದೆ.

ಅರಳಗುಂಡಿಗಿಯಿಂದ ಹೀಗೆ ವಿವಿಧ ಬಗೆಯ ಹಸಿವಿನೊಡಲನ್ನೊಂದಿದವರ ಒಡಲಿನ ಹಸಿವನ್ನು ತಣಿಸುತ್ತಾ ಜಂಗಮವಾಗುತ್ತ ಬಂದ ಶರಣಬಸವರು ಬಸವ ಕಲ್ಯಾಣಕ್ಕೆ ತೆರಳಿ ಇನ್ನೇನನ್ನೋ ಸಾಧಿಸಬೇಕೆಂಬ ಮನಸ್ಸುಳ್ಳವರಾಗಿರುತ್ತಾರೆ. ಆದರೆ ಒಮ್ಮೆ ಎಂಬತ್ತು ವರ್ಷದ ವೃದ್ದೆಯೊಬ್ಬಳು ತನಗೆ ಸಂತಾನ ಭಾಗ್ಯ ಬೇಕೆಂದಾಗ ಸಾಧ್ಯಸಾಧ್ಯತೆಯನ್ನು ಯೋಚಿಸದೇ ಒಪ್ಪಿಕೊಳ್ಳುತ್ತಾರೆ. ಆ ಮುದುಕಮ್ಮನ ವಯೋಮಾನಕ್ಕನುಸಾರ ಇದು ಅಸಾಧ್ಯವಾದಾಗ ಆಶ್ರಯದಾತರಾದ ದೊಡ್ಡಪ್ಪಗೌಡ-ನೀಲಮ್ಮರ ಮಗುವನ್ನೇ ಅವರ ಒಪ್ಪಿಗೆಯ ಮೇರೆಗೆ ಮುದುಕಮ್ಮನಿಗೆ ಕೊಡುತ್ತಾರೆ. ಇದರ ಋಣಸಂದಾಯಕ್ಕಾಗಿ ದೊಡ್ಡಪ್ಪಗೌಡರ ಕೋರಿಕೆಯಂತೆ ಬಸವಕಲ್ಯಾಣಕ್ಕೆ ತೆರಳದೇ ಕಲ್ಬುರ್ಗಿಯ ಅವರ ಮನೆಯಲ್ಲಿಯೇ ಉಳಿದುಕೊಂಡು ಋಣವನ್ನು ತೀರಿಸುತ್ತಾರೆ. ಹೀಗಾಗಿ ಇವರಿಗೆ ಕಲ್ಬುರ್ಗಿಯೇ ಕಾಯಕದ ನೆಲವಾಗಿ ಇದೇ ಕ್ಷೇತ್ರದಲ್ಲಿ ಕೈಲಾಸದನುಭವವನ್ನು ಪಡೆಯುತ್ತಾರೆ. ತಮ್ಮ ಕಾಯವೆಂಬ ಪವಿತ್ರ ದೇವಾಲಯದಲ್ಲಿಯೇ ತಮ್ಮ ಶಿವನನ್ನು ಕಂಡುಕೊಂಡು ಆತ ಅಹುದಹುದೆನ್ನುವಂತೆ ತಮ್ಮ ನಡೆಯನ್ನು ದಾಸೋಹಿಸುತ್ತಾ ಕಲಬುರ್ಗಿ ಕೇವಲ ಕಲ್ಯಾಣದ ಹೆಬ್ಬಾಗಿಲಲ್ಲ ಕೈಲಾಸದ ಹೆಬ್ಬಾಗಿಲೆನ್ನುವಂತೆ ಶರಣ ಸಂಸ್ಕೃತಿಯನ್ನು ಇಲ್ಲಿ ಬಿತ್ತಿ ಬೆಳೆಯುತ್ತಾರೆ. ಅದರ ಫಲಿತ ಇಂದಿಗೂ ಈ ನೆಲದಲ್ಲಿ ಅನುರಣಿಸುತ್ತಲಿದೆ.

ಆಗಿನಿಂದಲೇ ಶರಣಬಸವರು ಮತ್ತು ದೊಡ್ಡಪ್ಪಗೌಡರು ಜಗತ್ತೇ ವಿಸ್ಮಯವಾಗುವಂಥ ಗುರುಶಿಷ್ಯರಾಗುತ್ತಾರೆ. ಹೆಸರಿಗೆ ಮಾತ್ರ ಗುರುಶಿಷ್ಯರು ಆದರೆ ಎಲ್ಲಾ ದೃಷ್ಟಿಯಲ್ಲಿ ಸಮಾನರಾಗಿರುತ್ತಾರೆ. ಶರಣಬಸವರು ಕಲ್ಬುರ್ಗಿಯ ಖಾಜಾ ಬಂದೇ ನವಾಜರ ದರ್ಗಾಕ್ಕೂ



ಒಮ್ಮೆ ತಾವೇ ಹೋಗಿ ಗಂಧವನ್ನು ಲೇಪಿಸುವ ಮೂಲಕ ಸರ್ವಧರ್ಮ ಸಮನ್ವಯ ಮೆರೆದು ಇವನಾರವ ಇವನಾರವನೆಂದೆನಿಸದೇ ಇವನಮ್ಮವ ಇವನಮ್ಮವನೆಂದೆನಿಸಯ್ಯ ಎಂಬ ಬಸವನ ನುಡಿಯನ್ನು ನಡೆಯಾಗಿಸಿಕೊಳ್ಳುತಾರೆ. ಸರ್ವದರಲ್ಲಿಯೂ ಸರ್ವರಲ್ಲಿಯೂ ಇವನಮ್ಮವನೆಂಬ ಅರಿವಿನ ದಾಸೋಹಂಭಾವವನ್ನು ಕಾಣುತ್ತಾರೆ. ಹಾಗಾಗಿ ಇಂದಿಗೂ ಈ ನೆಲ ಸರ್ವಧರ್ಮ ಸಮನ್ವಯದ ಸಂಕೇತವಾಗಿ ವಿಶ್ವ ಕುಟುಂಬದ ಪರಿಕಲ್ಪನೆಯನ್ನು ಸಾಂಕೇತಿಸುತ್ತಲಿದೆ.

ಶರಣಬಸವರ ಅಂತಿಮ ದಿನಗಳು ಸಮೀಪಿಸುತ್ತಿದ್ದಾಗೊಮ್ಮೆ ಚರ ಎಂಬ ವ್ಯಕ್ತಿ ತನ್ನ ದಮ್ಮಿನ ಬಾದೆಯನ್ನು ನಿಮಗೆ ದಾಸೋಹ ಮಾಡುತ್ತೇನೆ ದಯವಿಟ್ಟು ಸ್ವೀಕರಿಸಿ ಎಂದು ಕೋರುತ್ತಾನೆ. ಆಗ ಶರಣಬಸವರು ಆತನಿಂದ ದಾಸೋಹ ಎಂಬ ಶಬ್ದ ಕೇಳಿದಾಕ್ಷಣ ಆತನ ನೋವೇ ತನ್ನ ನೋವೆಂದು ಪರಿಭಾವಿಸುತ್ತಾರೆ. ಆತನಿಂದ ಆತನ ದಮ್ಮಿನ ಉಸಿರನ್ನು ತಾವು ದಾಸೋಹವಾಗಿ ಪಡೆದು ಆತನನ್ನು ದಮ್ಮಿನ ಬಾದೆಯಿಂದ ಮುಕ್ತನನ್ನಾಗಿಸಿ ತಮ್ಮ ಆರೋಗ್ಯವನ್ನೇ ಆತನಿಗೆ ದಾಸೋಹ ಮಾಡಿ ತಮ್ಮ ಅಸೌಖ್ಯದಲ್ಲಿ ಆತನ ಸೌಖ್ಯವನ್ನು ಕಾಣುತ್ತಾರೆ. ನಂತರದಲ್ಲಿ ಅನಾರೋಗ್ಯ ಉಲ್ಬಣಗೊಂಡು ಕ್ರಿ.ಶ. ೧೮೨೨ರ ಪಾಲ್ಗುಣ ಕೃಷ್ಣಪಕ್ಷ ಪ್ರತಿಪದ ಗುರುವಾರ ರಾತ್ರಿ ೧೨ ಘಂಟೆಗೆ ಲಿಂಗೈಕ್ಯರಾಗುತ್ತಾರೆ. ೭೬ ವರ್ಷಗಳ ಕಾಲವಿಡಿ ಇನ್ನೊಬ್ಬರಿಗಾಗಿ ಬದುಕಿ, ಇನ್ನೊಬ್ಬರ ಒಡಲಸಿವೇ ತಮ್ಮೊಡಲಸಿವೆಂಬಂತೆ ಚಿಂತಿತರಾಗಿ ತಮ್ಮ ಬದುಕನ್ನೇ ದಾಸೋಹಂಭಾವದಲ್ಲಿ ದಾಸೋಹವನ್ನಾಗಿಸಿಕೊಂಡಿದ್ದೊಂದು ವಿಶ್ವದ ವಿಸ್ಮಯ.

ಶರಣಬಸವರು "ಲಿಂಗೈಕ್ಯ" ವಾದ ಸಂದರ್ಭವನ್ನು ಹೀಗೆ ಹೇಳುತ್ತಾರೆ, "ಇಷ್ಟಲಿಂಗದ ದಿವ್ಯದೃಷ್ಟಿ ಅಗಲದಂತೆ ತುಷ್ಟಿ-ಸಂತುಷ್ಟಿಗೊಂಡು ಮನ ನಿಲ್ಲಿಸಿ ಲಿಂಗಯ್ಯನೊಡಗೂಡಿ ಸರ್ವಾಂಗ ಲಿಂಗಮಯವಾಗಿ ಲಿಂಗಭಾವದಲಿ ಭಾವವನು, ಲಿಂಗದಲಿ ಭಂಗವಲ್ಲದ ವಿಶಿಷ್ಟ ಉತ್ಕೃಷ್ಟ ಮಹಾಲಿಂಗದಲಿ ಮರೆಯಾದರು. ಅಂಗ ಲಿಂಗದಲಿ ಬೆರೆದ ಶರಣರ ಪರಿಯ ಕಂಡು ದೇವ ದುಂದುಭಿ ಮೊಳಗಿದವು ಸುರಗಣವೆಲ್ಲ ಹೂ ಮಳೆ ಸುರಿಸಿ ದೈವಗಾನವೃಂದದಲ್ಲಿ ಮಂಗಳನಾದದಿಂದ ಶಿವ ಭಜನೆಯಾಯಿತು ಜಯಜಯಕಾರದಲಿ". ಎಂಬಂತೆ ಅಂದು ಲಿಂಗೈಕ್ಯದ ಕ್ಷಣದಲ್ಲಿ ಹಚ್ಚಿದ ದೀವಿಗೆ (ದೀಪ) ಇಂದಿಗೂ ಶರಣಬಸವೇಶ್ವರರ ಮಹಾಮನೆಯಲ್ಲಿ ನಂದದೆ ಬೆಳಗುತ್ತಲಿದೆ. ಆ ಬೆಳಕಿನ ಬೆಳಗು ಸರ್ವರಿಗೂ ದಾಸೋಹವಾಗುತ್ತಲಿದೆ.

ಭಕ್ತರು ಆ ಜ್ಯೋತಿಯನ್ನು ಭಕ್ತಿಭಾವದ ವಿಸ್ಮಯದಲ್ಲಿ ನೋಡಿ ಕಣ್ತುಂಬಿಸಿಕೊಳ್ಳುತ್ತಾರೆ. ಅದು ಬರೀ ಜ್ಯೋತಿಯಲ್ಲ ಅರಿವಿನ ಬೆಳಗು. ಬೆಳಗಿನ ಆದರ್ಶವಾಗಿ ಬೆಳಗುತ್ತಲಿದೆ. ಅಂದು ಶರಣಬಸವೇಶ್ವರರು ಸಕಲರೂ ಎಂಥದ್ದೇ ಸಂಕಷ್ಟದಲ್ಲಿದ್ದರೂ ನೆಮ್ಮದಿಯಿಂದ ತಣ್ಣಗಿರಲೆಂದು ಬಯಸಿದ್ದ ಕಾರಣಕ್ಕೇ ಇರಬೇಕು ಇಂದಿಗೂ ಶರಣಬಸವರು ಲಿಂಗೈಕ್ಯರಾದ ದಿವಸ ನಡೆಯುವ ಜಾತ್ರೆಯಂದು ಬಿರುಬೇಸಿಗೆಯಿದ್ದರೂ ಕಲ್ಬುರ್ಗಿಯಲ್ಲಿ ಒಂದೆರಡು ಹನಿಯಾದರೂ ಮಳೆಯ ಸಿಂಚನವಾಗುತ್ತದೆ. ರಥೋತ್ಸವವು ಜಾತಿ-ಮತ-ಪಂಥವೆನ್ನದೇ ಎಲ್ಲರ ಕಲ್ಯಾಣ ಬಯಸುವ ಸಂಭ್ರಮದ ಹಬ್ಬ. ಅಲ್ಲಿ ನೆರೆದಿರುವವರೆಲ್ಲರೂ ಬೇದಭಾವವಿಲ್ಲದೇ

ಕೈಗೆ ಕೈಜೋಡಿಸಿ ಪ್ರಗತಿಯ ರಥವನ್ನು ಮುನ್ನಡೆಸುತ್ತಾರೆ. ಆ ಮೂಲಕ ಕಲ್ಯಾಣದ ನಾಡಿನ ಶರಣರ ತತ್ವವನ್ನು ದಾಸೋಹಂಭಾವನೆಯ ಮೂಲಕ ಚಲನಶೀಲವಾಗಿಸುತ್ತಾರೆ. ಜಂಗಮಗೊಳಿಸುತ್ತಾರೆ. ತಾವೂ ಜಂಗಮವಾಗುತ್ತಾರೆ. ಬಸವಕಲ್ಯಾಣದ ಶರಣರ ಪ್ರೇರಣೆಯಿಂದ ದಾಸೋಹವನ್ನೇ ತಮ್ಮ ನಡೆಯಾಗಿಸಿಕೊಂಡ ಶರಣಬಸವರ ಶರಣತ್ವದಿಂದ ಕಲ್ಬುರ್ಗಿ ಕಲ್ಯಾಣದ ಹೆಬ್ಬಾಗಿಲಾಗಿ ಕಲ್ಬುರ್ಗಿಯ ಮನಮನೆಗಳೂ ದಾಸೋಹದ ಮನ-ಮನೆಗಳಾಗಿವೆ. ಶರಣಬಸವೇಶ್ವರರ ದೇವಸ್ಥಾನ ಭೌತಿಕವಾಗಿ ಸ್ಥಾವರವಾಗಿದ್ದರೂ ದಾಸೋಹದ ಮಹಾಮನೆಯಾಗಿ ಅಕ್ಷರಶಃ ಜಂಗಮವಾಗಿ ಸ್ಥಾವರಕ್ಕಳಿವಿಲ್ಲದಂತಾಗಿದೆ. ಈ ಬಗೆಯ ದಾಸೋಹದ ಮೂಲಕ ಸ್ಥಾವರನ್ನೇ ಜಂಗಮವನ್ನಾಗಿಸಿದ ವಿಭಿನ್ನ ಪರಿ.

ಶರಣಬಸವರ ಕೃಪೆಯೋ ಏನೋ ಇಂದಿಗೂ ಕಲ್ಬುರ್ಗಿಯಲ್ಲಿ ಅನ್ನ-ನೀರಿನ ಕೊರತೆ ಇಲ್ಲ. ಎಲ್ಲೆಲ್ಲಿಂದಲೋ ಬಂದು ಇಲ್ಲಿ ಬದುಕು ಕಟ್ಟಿಕೊಂಡವರು ಕಲ್ಬುರ್ಗಿಯನ್ನು ಬಿಟ್ಟು ಹೊರಡಲು ಮನಸ್ಸು ಮಾಡರು. ಕಾರಣಾಂತರಗಳಿಂದ ಕಲ್ಬುರ್ಗಿಯನ್ನು ಬಿಡಲೇಬೇಕಾದ ಅನಿವಾರ್ಯವಾದರೂ ಬಿಟ್ಟು ಹೊರಡುವಾಗ ಭಾವನಾತ್ಮಕತೆಯಿಂದ ಒಂದೆರಡು ಹನಿ ಕಣ್ಣೀರನ್ನುದುರಿಸಿಯೇ ಭಾರವಾದ ಮನದಿಂದ ತೆರಳುತ್ತಾರೆ. ಇಂದಿಗೂ ಕಲ್ಬುರ್ಗಿಯ ಹಲವಾರು ಮನೆಯ ಮುಂಭಾಗದಲ್ಲಿ ಪಕ್ಷಿಗಳಿಗೆ ಒಂದಿಷ್ಟು ನೀರು, ಬೊಗಸೆ ಕಾಳನ್ನಿರಿಸಿರುವುದನ್ನು ಕಾಣುತ್ತೇವೆ. ಬಿಸಿಲಿನ ದಾಹ ತಣಿಸಿಕೊಳ್ಳಲು ಯಾರದೋ ಮನೆಯ ಮುಂದೆ ನಿಂತು ಒಂದಿಷ್ಟು ನೀರು ಕೊಡಿ ಎಂದರೆ ನೀರಿನೊಂದಿಗೆ ಒಂದು ರೊಟ್ಟಿ ಒಂದಿಷ್ಟು ಮಜ್ಜಿಗೆಯನ್ನೇ ಕೊಡುವ ಉದಾರಿ ಇಲ್ಲಿಯವರು. "ನೀಡುವವರುಂಟು ಬೇಡುವವರಿಲ್ಲದೇ ಬಡವನಾದೆನಯ್ಯ" ಎಂಬ ಬಸವವಾಣಿ ಇಲ್ಲಿ ಇಂದಿಗೂ ಚಲನಶೀಲವಾಗಿದೆ. ಖಂಡಿತ ಈ ಮಾತಿನಲ್ಲಿ ಉತ್ಪ್ರೇಕ್ಷೆ ಇಲ್ಲ ಇದು ನನ್ನ ಅನುಭವ. ಇದು ಕಲ್ಯಾಣ ನಾಡಿನ ಕಲ್ಬುರ್ಗಿಯ ಸಂಸ್ಕೃತಿ. ಇಲ್ಲಿ ಬದುಕನ್ನು ಕಟ್ಟಿಕೊಂಡಿರುವ ನನ್ನ ಹೆಮ್ಮೆಯೂ ಸಹ.

ಶರಣಬಸವರು ಅರಳಗುಂಡಿಗೆಯಿಂದ ಕಲ್ಬುರ್ಗಿಗೆ ಬಂದು ತಮ್ಮ ಆಪ್ತ ಶಿಷ್ಯರಾದ ದೊಡ್ಡಪ್ಪಗೌಡರೊಂದಿಗೆ ಜಂಗಮರಾಗಿ ಬಾಳಿ ತಾವೇ ಗುರುವಾಗಿ ತಾವೇ ಶಿಷ್ಯರಾಗಿ, ದೊಡ್ಡಪ್ಪಗೌಡರನ್ನು ಶಿಷ್ಯರೆಂದೆಣಿಸದೇ ಎಷ್ಟೋ ಸಲ ಅವರಲ್ಲಿ ಗುರುವನ್ನು ಕಂಡು ಸಮಾನತೆ, ಸಮಭಾವದಿಂದ ಅವಿನಾಭಾವವಾಗಿ ಗುರುಶಿಷ್ಯರನ್ನೊಳಗೊಂಡ ಸಾಂಕೇತಿಕ ಮೂರ್ತಿಯಾಗಿ ಶರಣಬಸವೇಶ್ವರ ದೇವಸ್ಥಾನದಲ್ಲಿ ಪೂಜೆಗೊಳ್ಳುತ್ತಿದ್ದಾರೆ. ಈ ಅವಳಿ ದಿವ್ಯ ಮೂರ್ತಿ ಪರಮಾತ್ಮ-ಜೀವಾತ್ಮ, ಅಂಗ-ಲಿಂಗ, ಆತ್ಮ-ಜೀವಾತ್ಮ, ಅನುಭವ-ಅನುಭಾವ, ಗುರು-ಶಿಷ್ಯ... ಹೀಗೆ ಎಲ್ಲಕ್ಕಿಂತ ಹೆಚ್ಚಾಗಿ ಕಾಯಕ-ದಾಸೋಹವೆಂಬ ಸೂತ್ರದಡಿಯಲ್ಲಿ ಅವಿನಾಭಾವವಾಗಿ ಶರಣಬಸವ-ದೊಡ್ಡಪ್ಪಗೌಡರ ಪ್ರತೀಕವಾಗಿರಬಹುದು.

ಶರಣಬಸವರೇ ಗುರುವಾಗಿ ಶಿಷ್ಯರಾಗಿ ಅಥವಾ ದೊಡ್ಡಪ್ಪಗೌಡರೇ ಗುರುವಾಗಿ ಶಿಷ್ಯರಾಗಿ. ಅಥವಾ ಪರಸ್ಪರ "ಗುರುಶಿಷ್ಯರಿಂದೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂಬ ಶರಣರ ನುಡಿಗೆ ಸಾಕ್ಷಿಯಾಗಿ ಇವರ ದಾಸೋಹ ಸೇವೆ ಸತ್ಪಾತ್ರಕ್ಕೆ ಸಲ್ಲಿಕೆಯಾಗಿದೆ. ಇವರು ಮಾಡಿದ್ದು ಕಾಯಕ ನೀಡಿದ್ದು ದಾಸೋಹವಾಗಿ ಇಂದಿಗೂ ಸತ್ಪಾತ್ರಕ್ಕೆ



ಸಲ್ಲಿಕೆಯಾಗುತ್ತಲೇ ಇದೆ. ಸದಾ ಕೊಡುವುದನ್ನೇ ಕಲಿತು, ಕೊಡುವುದನ್ನೇ ಕಲಿಸಿ, ಸಕಲ ಜೀವಾತ್ಮರಿಗೆ ಲೇಸನೇ ಬಯಸಿ ಸರ್ವದರಲಿ ದಾಸೋಹಂಭಾವ ಕಂಡ ಮಹಾ ದಾಸೋಹಿ ಎನಿಸಿಕೊಂಡಿದ್ದಾರೆ. ಕಲ್ಬುರ್ಗಿಯಷ್ಟೇ ಅಲ್ಲ ನಾಡಿನ ಜನತೆಗೆ ಇವರ ನಡೆಯೇ ಆದರ್ಶವಾಗಿ ಇವರ ನಿಸ್ವಾರ್ಥ ದಾಸೋಹ ತತ್ವಕ್ಕೆ ಜನ, ಜನಾಂಗವಷ್ಟೇ ಅಲ್ಲ ವಿಶ್ವವೇ ತಲೆಬಾಗಿದೆ. ಸ್ವಾರ್ಥವೇ ಮೆರೆಯುತ್ತಿರುವ ಇಂದಿನ ವಿಶ್ವಕ್ಕೆ ಮತ್ತು ವಿಶ್ವದ ಹಸಿದ ಒಡಲುಗಳಿಗೆ ಮತ್ತು ಹಸಿದ ಮನಸ್ಸುಗಳಿಗೆ ಶರಣಬಸವರ ಕಾಯಕದೊಂದಿಗಿನ ಅನ್ನ ದಾಸೋಹ ಮತ್ತು ಜ್ಞಾನ ದಾಸೋಹವೆಂಬ ಮಾನವೀಯತೆಯ ಮಮಕಾರದ ಸಿಂಚನ ಬೇಕಿದೆ. ಆ ಮೂಲಕ ಒಡಲುಗೊಂಡವರಳಲಿಗೆ ಪ್ರೀತಿ-ಮಮಕಾರದ ತುತ್ತನ್ನಿರಿಸಬೇಕಿದೆ. ಅಂಥವರಿಗೆ ಅನ್ನದ ಮತ್ತು ಜ್ಞಾನದ ತುತ್ತಾಗಬೇಕಿದೆ.

ಸಕಲ ಜೀವಿಗಳಿಗೆ ಲೇಸನೇ ಬಯಸೆಂದ ಬಸವಾದಿ ಶರಣರ ನಿಲುವಿನಂತೆ ಅಂದಿನ ಶರಣಬಸವೇಶ್ವರರಿಂದ ಇಂದಿನ ಸಂಸ್ಥಾನದ ಎಂಟನೇ ಪೀಠಾಧ್ಯಕ್ಷರಾಗಿರುವ ಶರಣಬಸವಪ್ಪ ಅಪ್ಪನವರ ನಡೆಯವರೆಗೂ ಗಮನಿಸಿದಾಗ ಮಹಾದಾಸೋಹ ಪೀಠದ ಮೂಲಕ ನಡೆಸುತ್ತಿರುವ ವಿವಿಧ ಚಟುವಟಿಕೆಗಳು ಶಿಕ್ಷಣ ಪ್ರಸಾರ, ಸಮಾಜಮುಖಿ, ಜಂಗಮಮುಖಿ ಯೋಜನೆಗಳೆಲ್ಲದರಲ್ಲೂ ಕಾಯಕ ಪ್ರಜ್ಞೆ ಮತ್ತು ದಾಸೋಹಂಭಾವ ಕಂಡುಬರುತ್ತದೆ. ಕೃಷಿ ಕಾಯಕ ಒಪ್ಪಿಕೊಂಡಿರುವುದು. ಪ್ರಸಾದ ದಾಸೋಹಕ್ಕಾಗಿ ಹಗಲಿರುಳು ದುಡಿಯುವುದು. ಶಿಕ್ಷಣ ದಾಸೋಹಕ್ಕಾಗಿ ಕಾಯಕ ವಿಸ್ತರಿಸಿರುವುದು. ಇಡೀ ಜೀವ ಸಂಕುಲಕ್ಕಾಗಿ ಕಾಯಕವನ್ನೇ ಮೀಸಲಾಗಿಸಿ ಗರಿಷ್ಠ ಉತ್ಪಾದನೆಯ ಮೂಲಕ ದಾಸೋಹವನ್ನು ವಿಸ್ತರಣೆ ಮಾಡಿರುವುದು. ಇಲ್ಲಿ ಸ್ವಯಂವೇದ್ಯವೆನಿಸುತ್ತಲಿವೆ. "ನಾವು ಭೂತಾಯಿಯ ಮಕ್ಕಳು ಅದು ಕೊಟ್ಟ ಪ್ರಸಾದ ಸ್ವೀಕರಿಸುತ್ತೇವೆ. ಅದರ ಋಣ ತೀರಿಸಬೇಕಾದರೆ ದಾಸೋಹ ನಡೆಸುತ್ತೇವೆ" ಎನ್ನುತ್ತಿರುವ ಅಪ್ಪನವರ ನಿಲುವು ಇಂದಿಗೂ ಚಿಂತನಾರ್ಹವಾಗಿದೆ.

ಸಂಸ್ಥಾನದ ಇಂದಿನ ಪೀಠಾಧಿಪತಿ ಪೂಜ್ಯ ಡಾ. ಶರಣಬಸವಪ್ಪ ಅಪ್ಪ ಅವರು ಮಹಾದಾಸೋಹ ಪೀಠವೆಂಬ ಸಂಸ್ಥಾನದ ಮೂಲಕ ನಡೆಸುವ ಕೆಲವು ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ಡೊನೇಷನ್ ಪಡೆಯುವ ಪರಿ ಅಷ್ಟೊಂದು ಸರಿಯಲ್ಲ ಎಂದು ಯಾರಾದರೂ ಕೇಳಬಹುದು. ಆದರೆ ದಾಸೋಹಕ್ಕಾಗಿ ಬೇಕಾಗಿರುವ ಸೊಮ್ಮನ್ನು ಕಾಯಕ ಮಾಡಿ ಉಳಿಸಿಕೊಂಡಿರುವ ಉಳ್ಳವರಿಂದ ದಾಸೋಹ ರೂಪದಲ್ಲಿ ಪಡೆದು ಅದೇ ಸೊಮ್ಮನ್ನು ಇಲ್ಲದವರ ಮಕ್ಕಳಿಗೂ ಅನ್ನ ಮತ್ತು ಜ್ಞಾನ ದಾಸೋಹಕ್ಕಾಗಿ ವ್ಯಯಿಸುವ ಉದ್ದೇಶ ಅಲ್ಲಿರುವುದನ್ನು ಗಮನಿಸಿದಾಗ ಅದು ಸರಿಯಾದ ಕ್ರಮವೆನಿಸುತ್ತದೆ. (ಬಸವಣ್ಣನವರ ಅಂದಿನ ಮಹಾಮನೆಯಲ್ಲಿಯೂ ಸಹ ವಿವಿಧ ಕಾಯಕ ನಿರತ ಶರಣರು ತಮ್ಮ ಕಾಯಕದಿಂದ ಸಂಪಾದಿಸಿದ ದವಸ ಧಾನ್ಯಗಳನ್ನು ಬಳಸಿ ನೆರೆದ ಶರಣರಿಗೆ ದಾಸೋಹ ವ್ಯವಸ್ಥೆ ಮಾಡುತ್ತಿದ್ದರಂತೆ.) ಈ ತತ್ವದಡಿಯಲ್ಲಿ ಕಲಬುರ್ಗಿಯ ಮಹಾದಾಸೋಹ ಪೀಠದ ಮೂಲಕ ಎಲ್ಲಾ ವರ್ಗದ ಮಕ್ಕಳಿಗೆ ಶಿಕ್ಷಣ ನೀಡಿ ಅವರನ್ನು ಜ್ಞಾನಿಗಳನ್ನಾಗಿಸುವುದು. ಜ್ಞಾನ ಪಡೆದ ನಂತರ ಸ್ವಾವಲಂಭನೆಯ ಸಮಾಜ ನಿರ್ಮಾಣ ಮಾಡಿ ಆರ್ಥಿಕ ಮಟ್ಟ ಎತ್ತರಿಸುವ ಉದ್ದೇಶವನ್ನಿರಿಸಿಕೊಂಡಿರುವುದು. ವೈಜ್ಞಾನಿಕ ಮತ್ತು ತಾಂತ್ರಿಕ ಮನೋಭಾವವನ್ನು ಯುವಕರಲ್ಲಿ

ಬೆಳೆಸಲು ಬೇಕಾಗಿರುವ ಮಟ್ಟದಲ್ಲಿ ಶಿಕ್ಷಣವನ್ನು ನೀಡುವುದು. ಸ್ತ್ರೀ ಸಬಲೀಕರಣಗೊಳಿಸಿ ಅವರಲ್ಲಿ ವೈಚಾರಿಕತೆ ಮತ್ತು ಜ್ಞಾನವನ್ನು ಹೆಚ್ಚಿಸುವುದು. ನಾಡು, ನುಡಿ, ಇತಿಹಾಸ, ಸಂಸ್ಕೃತಿಯ ಅರಿವನ್ನು ನೀಡುವುದು. ಸರ್ವರಲ್ಲಿ ರಾಷ್ಟ್ರೀಯ ಹೊಣೆಗಾರಿಕೆಯನ್ನು ಜಾಗೃತಗೊಳಿಸುವುದು... ಹೀಗೆ ಹಲವಾರು ಮಹತ್ವದ ಉದ್ದೇಶವನ್ನಿರಿಸಿಕೊಂಡಿರುವುದನ್ನು ಗಮನಿಸಬೇಕಿದೆ. ಈ ಎಲ್ಲದಕ್ಕೂ ವೇದಿಕೆಯಾಗಿ "ದಾಸೋಹ ಜ್ಞಾನರತ್ನ" ಎಂಬ ಪತ್ರಿಕೆಯ ಮೂಲಕ ದಾಸೋಹಂಭಾವ ವಿಚಾರಗಳನ್ನು ಜಂಗಮಗೊಳಿಸುತ್ತಿರುವುದು ಉಲ್ಲೇಖಾರ್ಹ.

"ತಾನಿಲ್ಲದೇ ಮಾಡುವುದು ಕಾಯಕವಾಗಿ ಅಹಂಕಾರವ ಕೆಡಿಸಿತ್ತು, ತಾನಿಲ್ಲದೇ ನೀಡುವುದು ದಾಸೋಹವಾಗಿ ಅಹಂಕಾರವ ಬಿಡಿಸಿತ್ತು, ತಾನಿಲ್ಲದೇ ಭಕ್ತಿಯಿಂದ ಪಡೆವುದು ಸಹಜ ಪ್ರಸಾದವಾಗಿ ಪರಿಣಮಿಸಿತ್ತು ಹೀಗೆ ತನ್ನವಣಿದು ನಿನ್ನ ಮರೆದಡೆ ತನ್ನಂತೆ ಮಾಡುವನೆಂಬುದು ದಾಸೋಹ ಸೂತ್ರವಯ್ಯಾ ಮಹಾದಾಸೋಹಿ ಶರಣಬಸವ" ಎಂಬ ದಾಸೋಹ ಸೂತ್ರವನ್ನಳವಡಿಸಿಕೊಂಡಿರುವ ಮಹಾದಾಸೋಹ ಪೀಠವಿದು. "ಸೋಹಂ ಎಂಬುದು ಅಂತರಂಗದ ಗರ್ವ, ಶಿವೋಹಂ ಎಂಬುದು ಬಹಿರಂಗದ ಅಹಂಕಾರ, ಈ ಉಭಯವನಳಿದು ದಾಸೋಹಂಭಾವನೆ ಕರುಣಿಸಿ ಬದುಕಿಸಯ್ಯಾ ಅಖಂಡೇಶ್ವರ" ಎಂಬ ಷಣ್ಮುಖ ಶಿವಯೋಗಿಗಳ ನಿಲುವಿನಂತೆ ಕಾಯಕ ತತ್ವದ ಮಹಾದಾಸೋಹಪೀಠದ ಮೂಲಕ ಸರ್ವದರಲಿ, ಸಕಲರೋಳ್ ದಾಸೋಹಂಭಾವವು ಅನುಭಾವವಾಗಿ ಸತ್ಪಾತ್ರಕ್ಕೊಳಗಾಗುವ ಪರಿಯನ್ನು ಕಲಬುರ್ಗಿಯ ನೆಲದಲ್ಲಿ ಸರ್ವದರಲಿ ಸ್ಪರ್ಷಿಸುತ್ತಿರುವುದನ್ನು ಅನುಭಾವಿಗಳ ಅನುಭವಕ್ಕೆ ಬರುತ್ತಲಿದೆ. ಅನುಭವಿಸುವ ಅನುಭಾವಿತನ ಬೇಕಷ್ಟೇ.

**ನಾ ಮಾರಬಂದ ಸುಧೆಯ ಕೊಂಬವರಾರೂ ಇಲ್ಲ**
**ಹೊರಗಣ ಭಾಜನಕ್ಕೆ ಒಳಗಣ ಇಂದ್ರಿಯಕ್ಕೆ**
**ಉಂಡು ದಣಿದು ಕಂಡು ದಣಿದು ಸಂದೇಹವ**
**ಬಿಟ್ಟು ದಣಿದು**
**ಕಂಡುದ ಕಾಣದೆ ಸಂದೇಹದಲ್ಲಿ ಮರೆಯುದೆ**
**ಆನಂದವೆಂಬುದ ಆಲಿಂಗನವ ಮಾಡಿ**
**ಆ ಕಂಗಳಂ ಮುಚ್ಚಿ ಮತ್ತಮಾ ಕಂಗಳಂ ತೆರೆದು**
**ನೋಡಲಾಗಿ**
**ಧರ್ಮೇಶ್ವರಲಿಂಗವು ಕಾಣಬಂದಿತ್ತು.**





## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ-೩೨ರ ಸರಿಯುತ್ತರಗಳು

೧. (ಈ) ಸಗುಣ  ೨. (ಇ) ನಿಗುಚಿ  ೩. (ಅ) ಉಗ್ಘಡಿಸುವ ಗುಬ್ಬಿದೇವಯ್ಯ
೪.(ಆ) ಡಾ.ನಾ. ಮೊಗಸಾಲೆ  ೫. (ಇ) ಅನುಶ್ರೇಣಿ ಯಜಮಾನಿಕೆ

'ಮಹಾಮನೆ'ಯ "ವಚನ ರಸಪ್ರಶ್ನೆ-೩೨"ಕ್ಕೆ ಸರಿಯುತ್ತರ ಕಳಿಸಿಲ್ಲದ ಕಾರಣ, ಈ ಸಂಚಿಕೆಯ ಬಹುಮಾನಗಳನ್ನು ಯಾರಿಗೂ ಕೊಡಲಾಗಿಲ್ಲ.

### ವಚನ ರಸಪ್ರಶ್ನೆ-೩೩ರ ಪ್ರಶ್ನೆಗಳು

**೧. ಡೋಹರ ಕಕ್ಕಯ್ಯನ ಅಂಕಿತ ನಾಮ:**
(ಅ) ಮಲ್ಲಿಕಾರ್ಜುನ  (ಆ) ಸಂಗಯ್ಯ
(ಇ) ಅಭಿನವ ಮಲ್ಲಿಕಾರ್ಜುನ  (ಈ) ಚೆನ್ನಮಲ್ಲಿಕಾರ್ಜುನ

**೨. 'ಜಾಂಬೇಶ್ವರ' ಯಾರ ಅಂಕಿತ ನಾಮ?**
(ಅ) ರಾಯಸದ ಮಂಚಣ್ಣ  (ಆ) ರೇಚದ ಬಂಕಣ್ಣ
(ಇ) ಲದ್ದೆಯ ಸೋಮಯ್ಯ  (ಈ) ವೀರ ಸೊಡ್ಡಳ

**೩. ಚಮ್ಮಾಳಿಗೆ ಪದದ ಅರ್ಥ:**
(ಅ) ಚಾವಟಿ  (ಆ) ಜಿಗುಟು
(ಇ) ಯುಗ  (ಈ) ಚರ್ಮದ ಪಾದುಕೆ

**೪. ಕರ್ಮಕಾಂಡಿ ಎಂದರೆ:**
(ಅ) ವೇದಗಳ ಕರ್ಮಕಾಂಡವನ್ನು ನಂಬುವಾತ  (ಆ) ಮೋಸಗಾರಿಕೆ
(ಇ) ಕಡಾಣಿ  (ಈ) ಕಾಡಿಗೆ

**೫. ಎಲ್ಲರ ಸುಂಕ ಎತ್ತು ತೊತ್ತು ಬಂಡಿ ಬಲ್ಲೆತ್ತು – ಎನ್ನುವ ಸಾಲು ಯಾರ ವಚನದಲ್ಲಿ ಬರುತ್ತದೆ?**
(ಅ) ಮನಸಂದ ಮಾರಿತಂದೆ  (ಆ) ಅಂಗಸೊಂಕಿನ ಲಿಂಗತಂದೆ
(ಇ) ಕನ್ನದ ಮಾರಿತಂದೆ  (ಈ) ಮೈದುನ ರಾಮಯ್ಯ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.**

# ಅಗಣಿತ

**ಡಾ. ಅಮರೇಶ ನುಗಡೋಣಿ**
'ಸೂರು', ಎಂ.ಪಿ. ಪ್ರಕಾಶ ನಗರ,
ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,
ಹೊಸಪೇಟೆ – ೫೮೩ ೨೦೧
ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೯

**ಆಹ್ವಾನವಿಲ್ಲ ಪ್ರಾಣಲಿಂಗವಾಗಿ**
**ವಿಸರ್ಜನವಿಲ್ಲ ಲಿಂಗ ನೆಲೆಗೊಂಡಿಪ್ಪುದಾಗಿ**
**ಇದು ಕಾರಣ, ಆಹ್ವಾನ ವಿಸರ್ಜನವಿಲ್ಲ**
**ಶರಣನ ಪರಿ ಬೇರೆ**
**ಅಂಗಸಂಗವೆ ಲಿಂಗ, ಲಿಂಗಸಂಗವೆ ಮನ**
**ಕೂಡಲಸಂಗಮನ ಶರಣ ಸುಯಿದಾನಿ**

**– ಬಸವಣ್ಣ**

ವಚನಕಾರರ ಕಲ್ಪನೆಯ ದೇವರು ಬೇರೆಯೇ. ಲೋಕದ ದೇವರುಗಳಂತಲ್ಲ. ಲೋಕದ ಜನರು ಭೌತಿಕ ರೂಪದ ದೇವರನ್ನು ರೂಪಿಸಿಕೊಂಡು, ಆ ದೇವರನ್ನು ಕುರಿತು ನೂರಾರು ಆಚರಣೆಗಳನ್ನು ಮಾಡುತ್ತ ಅದರಲ್ಲೇ ಮುಳುಗಿ ಏಳುತ್ತಾರೆ. ಇಂಥವರಿಗೆ ಲಿಂಗದ ಕಲ್ಪನೆ ಇರುವುದಿಲ್ಲ. ದೇವರನ್ನು ಕುರಿತ ಆಚರಣೆಯಲ್ಲಿ ದೇವರನ್ನು ತಂದು ಕೂಡಿಸುವುದು ಮತ್ತು ನಾನಾ ರೀತಿಯಲ್ಲಿ ಆಚರಿಸುವುದು ನಂತರ ಒಯ್ದು ನೀರಿನಲ್ಲಿ ಬಿಡುವುದು ಮಾಡುತ್ತಾರೆ, ಲೋಕದ ಜನ. ಈ ಬಗೆಯ ಆಚರಣೆಗಳನ್ನು ಹಲವು ಬಗೆಯಲ್ಲಿ ಮಾಡುತ್ತಾರೆ. ಸಾಮಾನ್ಯವಾಗಿ ತೀರ್ಥಯಾತ್ರೆಗೆ ಹೋಗುವವರು, ಹೋಗಿ ನಾನಾ ತೀರ್ಥ ಸ್ಥಳಗಳಲ್ಲಿ ದೇವರನ್ನು ಕಂಡು ಮರಳುವಾಗ ಆಯಾ ಸ್ಥಳಗಳ ದೇವರ ಕುರುಹುಗಳನ್ನು (ಫೋಟೊ) ಮನೆಗೆ ತರುತ್ತಾರೆ. ತಂದು ಎಲ್ಲ ದೇವರ ಕುರುಹುಗಳನ್ನು ಗದ್ದುಗೆಯ ಮೇಲಿಟ್ಟು ಪೂಜಿಸಿ, ನೆರೆಹೊರೆಯವರನ್ನು ಕರೆದು ಪ್ರಸಾದ ಹಂಚುತ್ತಾರೆ. ತದನಂತರ ಮನೆಮಂದಿಯಲ್ಲ ಸೇರಿ ಸಮೀಪದ ನದಿಗೆ ಹೋಗಿ ದೇವರನ್ನು ವಿಸರ್ಜಿಸಿ ಬರುತ್ತಾರೆ. ಇದರಲ್ಲಿಯೇ ತೃಪ್ತಿ ಹೊಗುತ್ತಾರೆ. ಇನ್ನು ಕೆಲವೊಂದು ಕಡೆ ಸಾಮೂಹಿಕವಾಗಿ ಸೇರಿಕೊಂಡು ದೇವರನ್ನು ಆಹ್ವಾನಿಸಿ, ಕರೆತಂದು ಕೂಡಿಸಿ ವೈಭವದಿಂದ ಆಚರಿಸಿ ನಂತರ ಸಾಮೂಹಿಕವಾಗಿಯೇ ವಿಸರ್ಜಿಸುತ್ತಾರೆ. ಇದಕ್ಕೆ ನಿದರ್ಶನವೆಂದರೆ ಗಣೇಶ ಹಬ್ಬ, ಗೌರಿಯ ಹಬ್ಬ, ಪೀರಲು (ಮೊಹರಂ) ಹಬ್ಬ ಮುಂತಾದವು. ಇವು ಸಾರ್ವಜನಿಕವಾಗಿಯೇ ನಡೆಯುತ್ತವೆ. ವೈಯಕ್ತಿಕವಾಗಿ ಕುಟುಂಬಗಳಲ್ಲಿ, ಊರೊಟ್ಟಿಗೆ ಸೇರಿ ಮಾಡುವವು ಬೇಕಾದಷ್ಟಿವೆ. ದೇವರನ್ನು



ಆಹ್ವಾನಿಸಿ ಕರೆದು ಕೂಡಿಸಿ, ಆಚರಣೆಯ ನಂತರ ನದಿಗೆ ವಿಸರ್ಜಿಸುವ ಈ ಪದ್ಧತಿಯನ್ನು ಕಂಡ ಬಸವಣ್ಣ ಮೇಲಿನ ವಚನದಲ್ಲಿ ಶರಣನ ಪರಿ ಹೇಗೆಂಬುದನ್ನು ನಿರೂಪಿಸಿದ್ದಾನೆ.

ಮೂಲತಃ ವಚನಕಾರರು ಬೌದ್ಧಿಕ ರೂಪದ ದೇವರುಗಳನ್ನು ನಂಬುವುದಿಲ್ಲ. ದೇವಾಲಯದೊಳಗೆ ಪ್ರತಿಷ್ಠಾಪನೆಗೊಂಡ ದೇವರನ್ನು ನಿರಾಕರಿಸಿದರು. ಲಿಂಗವೆಂಬ ಕುರುಹನ್ನು ಭಕ್ತನಿಗೆ ನೀಡಿದರು. ಈ ಕುರುಹಿನಿಂದ ಅರಿವಿನೆಡೆಗೆ ಸಾಗಿ ಸಾಧನೆ ಮಾಡುತ್ತ ಸಾಧಕನ ದೇಹ – ಪ್ರಾಣವೇ ಲಿಂಗವಾಗಿ ಪರಿವರ್ತನೆ ಹೊಂದುವುದು. ಪ್ರಾಣಲಿಂಗವಾದಾಗ ಆಹ್ವಾನ ಎಲ್ಲಿಯದು? ಇನ್ನು ಕರೆತಂದ ದೇವರನ್ನು ಕೂಡಿಸಿ, ಆಚರಿಸುವುದು ಮತ್ತು ವಿಸರ್ಜಿಸುವುದು ಎಲ್ಲಿಯದು? ಪ್ರಾಣದಲ್ಲಿ ಲಿಂಗ ನೆಲೆಗೊಂಡಿರುವಾಗ ವಿಸರ್ಜಿಸುವ ಪ್ರಶ್ನೆಯಿಲ್ಲ. ಹೀಗಿರುವಾಗ ಆಹ್ವಾನ, ವಿಸರ್ಜನೆ ಎಂದರೇನು?

'ಅಂಗಸಂಗವೇ ಲಿಂಗ, ಲಿಂಗಸಂಗವೇ ಮನ' ಎಂಬುದು ಶರಣರ ನಿಲುವು. ಕರೆಯುವುದು – ಕಳಿಸುವುದು ಶರಣರ ನಿಲುವಲ್ಲ. ಶರಣನ ಅಂಗವೇ ಲಿಂಗ. ಇದರಿಂದ ಶಿವನ ಶರಣರು ನಿತ್ಯ ತೃಪ್ತರು ಎಂದು ಬಸವಣ್ಣ ನಿರೂಪಿಸಿದ್ದಾನೆ.

ಬಸವಣ್ಣನ ಇನ್ನೊಂದು ವಚನದಲ್ಲಿ. ಇದೇ ವಿಷಯವಿದೆ.

**ಆಹ್ವಾನಿಸಿ ಕರೆದಲ್ಲಿ ಎಲ್ಲಿರ್ದನೋ,**
**ಈರೇಳುಲೋಕ ಹದಿನಾಲ್ಕು ಭುವನವನೊಳಕೊಂಡಿಪ್ಪ ದಿವ್ಯವಸ್ತು**
**ಮತ್ತೆ ವಿಸರ್ಜಿಸಿ ಬಿಡುವಾಗ ಎಲ್ಲಿರ್ದನೋ,**
**ಮುಳ್ಳೂರ ತೆರಹಿಲ್ಲದಿಪ್ಪ ಅಖಂಡವಸ್ತು**
**ಬರಿಯ ಮಾತಿನ ಬಳಕೆಯ ತೂತಜ್ಞಾನವ ಬಿಟ್ಟು,**
**ನೆಟ್ಟನೆ ತನ್ನ ಕರಸ್ಥಲದೊಳಗಿರುತಿಪ್ಪ ಇಷ್ಟಲಿಂಗವ ದೃಷ್ಟಿಸಿ ನೋಡಲು,**
**ಅಲ್ಲಿ ತನ್ನ ಮನಕ್ಕೆ ಮನ ಸಂಧಾನವಾದ ದಿವ್ಯನಿಶ್ಚಯವೊದಗಿ,**
**ಆ ದಿವ್ಯನಿಶ್ಚಯದಿಂದ ಕುಳವಡಗಿ ಅದ್ವೈತವಪ್ಪುದು**
**ಇದು ಕಾರಣ, ನಮ್ಮ ಕೂಡಲಸಂಗನ ಶರಣರು**
**ಆಹ್ವಾನ – ವಿಸರ್ಜನ ಎಂಬ ಉಭಯ ಜಡತಿಯ ಬಿಟ್ಟು**
**ತಮ್ಮ ತಮ್ಮ ಕರಸ್ಥಲದಲ್ಲಿ ನಿಶ್ಚಯಿಸಿದರಾಗಿ**
**ಸ್ವಯಲಿಂಗವಾದರು ಕಾಣಿಭೋ.**

ಮೊದಲ ವಚನದ ಭಾವವನ್ನು ಈ ವಚನದಲ್ಲಿ ವಿಸ್ತರಿಸಿ ನಿರೂಪಿಸಲಾಗಿದೆ. ದೇವರನ್ನು ಕರೆದು ತರುವುದು ಎಂದರೇನು? ದೇವರೆಲ್ಲಿ ಕುಳಿತಿದ್ದ? ಶರಣನ ದೇವರು ಭೂಮಿ – ಆಕಾಶವನ್ನು ವ್ಯಾಪಿಸಿರುವನು. ಅಂಥ ದೇವರನ್ನು ಹಿಡಿದು ತರುವುದು ಸಾಧ್ಯವೆ. ವಿಸರ್ಜಿಸಿದಾಗ ಅಂತಹ ದಿವ್ಯವಸ್ತು ಮತ್ತೆ ಅಡಗುವುದೆಲ್ಲಿ? ಆಹ್ವಾನ – ವಿಸರ್ಜನೆಯ ಆಚರಿಸುವವರು ಶರಣರಲ್ಲ. ಕರಸ್ಥಲದಲ್ಲಿ ಲಿಂಗವಿಟ್ಟುಕೊಂಡು ಮನ ಅನುಸಂಧಾನವಾದಾಗ ಶರಣ–ಲಿಂಗಭೇದವಿಲ್ಲದೆ ಎರಡು ಅಳಿದು ಒಂದಾಗುವ ಪರಿಯದು. ಸ್ವಯಲಿಂಗವಾಗುವ ದಾರಿ ಶರಣರದು ಎಂದು ಇಲ್ಲಿ ನಿರೂಪಿಸಿದೆ.

## ಒಂದು ವಚನ ~ ಎರಡು ನೋಟ

ಡಾ. ಶ್ರೀಮತಿ ಕಲಾಶ್ರೀ ಅವರು ಸೂಕ್ಷ್ಮ ಸಂವೇದನೆಯ ಮತ್ತು ಅತ್ಯುತ್ತಮ ಅಭಿರುಚಿಯ ಸಾಹಿತ್ಯದ ಪ್ರತಿಪಾದಕರು. ಮಹಾರಾಣಿ ಕಲಾ ಕಾಲೇಜಿನಲ್ಲಿ ಇವರು ಕನ್ನಡ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಲ್ಲಿನ ಸ್ನಾತಕೋತ್ತರ ಕೇಂದ್ರದ ಸಂಯೋಜಕರಾಗಿ ಇವರು ಉತ್ತಮ ಸೇವೆ ಸಲ್ಲಿಸುತ್ತಿದ್ದಾರೆ.

ಡಾ. ಜಿ.ಜಿ. ಹಿರೇಮಠ. ಪ್ರಾಂಶುಪಾಲರು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಾದಾಮಿ. ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯದಿಂದ 'ಅಲ್ಲಮನ ವಚನಗಳಲ್ಲಿ ಉಪಮೆ ರೂಪಕ ಪ್ರತಿಮೆಗಳ ಬೆಡಗು' ಎಂಬ ವಿಷಯದಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದಿದ್ದು; ಸದ್ಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಾದಾಮಿಯಲ್ಲಿ ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಇವರು ವಚನ ಸಾಹಿತ್ಯ ಅಧ್ಯಯನದಲ್ಲಿ ಆಸಕ್ತಿ ಹೊಂದಿರುವರು. ಇವರ 'ವಚನ ಪರಿಮಳ' ಎನ್ನುವ ಕೃತಿಯನ್ನು ಸಂಪಾದನೆ ಮಾಡಿ ಪ್ರಕಟಿಸಲಾಗಿದೆ.

**ಕಾಮಧೇನುವೆಂದಡೆ ಇಹುದಕ್ಕೆ ನೆಲೆ ಬೇಕು**
**ಕಲ್ಪತರುವೆಂದಡೆ ಹುಟ್ಟೂದಕ್ಕೆ ಭೂಮಿ ಬೇಕು**
**ಚಿಂತಾಮಣಿಯೆಂದಡೆ ತಾನೊಂದ ಚಿಂತಿಸಿ ಬೇಡಿಯಲ್ಲದೆ**
**ಕೊಡದೊಂದುವ**
**ಇವಕ್ಕೆಲ್ಲಕ್ಕೂ ಒಂದೊಂದು ನಿಂದ ನೆಲೆ ವಾಸವಾಯಿತ್ತು**
**ಮನದರಿವಿಂಗೆ ಕೈಯ ಕುರುಹಿಂಗೆ**
**ವಿಚಾರದಿಂದ ಒಳಹೊಕ್ಕು ನಿಂದು ನೋಡಲಾಗಿ**
**ಹಿಂದಳ ಕತ್ತಲೆಯ ಮುಂದಳ ಬೆಳಗಿನ ಉಭಯದ ಸಂಧಿಯಲ್ಲಿ**
**ಸಲೆ ಸಂದು ತೋರುತ್ತದೆ ನಿಜದ ಬೆಳಗು ತೋರುತ್ತದೆ**
**ಸದಾಶಿವಮೂರ್ತಿಲಿಂಗದಲ್ಲಿ**

**ಅರಿವಿನ ಮಾರಿತಂದೆ**

### ನಿಜದ ಬೆಳಕಿನ ಹುಡುಕಾಟ

**ಡಾ. ಕಲಾಶ್ರೀ ಎಚ್.ಎಂ.**

*ಎಂ.ಐ.ಜಿ. ನಂ. ೬೦, ೫ನೇ ಮುಖ್ಯರಸ್ತೆ,*
*ಮಾರುತಿ ದೇವಸ್ಥಾನದ ರಸ್ತೆ, ಕುವೆಂಪು ನಗರ*
*ಮೈಸೂರು - ೫೭೦ ೦೦೯*
*೯೮೪೫೫ ೧೧೦೯೯*

ಬಸವಣ್ಣನ ಸಮಕಾಲೀನ ಎಂದಷ್ಟೇ ಇವನ ಬಗೆಗೆ ಮಾಹಿತಿ. ಸುಮಾರು ೩೦೯ ವಚನಗಳನ್ನು ರಚಿಸಿರುವ ಈತ ತನ್ನ ವಚನಗಳನ್ನು 'ಸದಾಶಿವಮೂರ್ತಿಲಿಂಗ' ಎಂಬ



ಅಂಕಿತದೊಂದಿಗೆ ಪೂರ್ಣಗೊಳಿಸಿದ್ದಾನೆ. ಅರಿವಿನ ಸಾಕಾರಮೂರ್ತಿಯಂತಿದ್ದ ಈತನನ್ನು ಶರಣರು ಅನ್ವರ್ಥಕವಾಗಿಯೂ 'ಅರಿವಿನ' ಮಾರಿತಂದೆ ಎಂದಿದ್ದಿರಬೇಕು. ಈತನ ವಚನಗಳಲ್ಲಿ ಎರಡು ಅಂಶಗಳನ್ನು ಪ್ರಮುಖವಾಗಿ ಗುರುತಿಸಬಹುದು. ಕೆಲವು ವಚನಗಳಲ್ಲಿ ವೀರಶೈವ ಧರ್ಮದ ತತ್ತ್ವಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಈತ ಪ್ರಸ್ತಾಪಿಸುತ್ತಾನೆ. ಮತ್ತೆ ಕೆಲವದರಲ್ಲಿ ಈತ ಅಲ್ಲಮಪ್ರಭುವಿನಂತೆ ಅನುಭಾವ ಮತ್ತು ಬಯಲು ತತ್ತ್ವಗಳ ನಿಗೂಢತೆಯನ್ನು ಬೇಧಿಸಿರುವಂತೆ ಭಾಸವಾಗುತ್ತದೆ.

ಅರಿವಿನ ಸಿದ್ಧಿಯನ್ನು ಸಾಧಿಸಿರುವ ವಚನಕಾರ, ಸಾಮಾನ್ಯರು ಮಹತ್ತ್ವದ್ದೆಂದು ಭಾವಿಸಿರುವ ಸಂಗತಿಗಳ ಮಹತ್ತರತೆಯನ್ನು ಸರಳವಾಗಿ ಅಷ್ಟೇ ತರ್ಕಬದ್ಧವಾಗಿ ನಿರಸನಗೊಳಿಸಿಬಿಡುತ್ತಾನೆ. ಕಾಮಧೇನು, ಕಲ್ಪತರು, ಚಿಂತಾಮಣಿಗಳು ದೇವಲೋಕದ ಅಮೂಲ್ಯ ವಿಶೇಷಗಳು. ದೇವಲೋಕದಲ್ಲಿರುವ ಈ ಅತ್ಯಂತ ಆಕರ್ಷಣೀಯವಾದ ಇವುಗಳ ಬಗೆಗೆ ಭೂಲೋಕದವರು ಬಲು ಕೌತುಕ ಹೊಂದಿದವರಾಗಿದ್ದಾರೆ. ಇವುಗಳ ಅಸ್ತಿತ್ವದ ಬಗೆಗಿನ ಕಲ್ಪನೆಗಳು ಅಪಾರ. ಇವು ದೇವಲೋಕದಲ್ಲಿರುವುದರಿಂದಲೇ ತಮಗೆ ಎಂದಿಗೂ ದಕ್ಕುವುದಿಲ್ಲವೆಂದು ವೃಥಾ ಚಿಂತಿತರಾಗುತ್ತಾರೆ.

ಅರಿವಿನ ಮಾರಿತಂದೆ ಪ್ರಸ್ತುತ ವಚನದಲ್ಲಿ ಅವುಗಳ ಅಸ್ತಿತ್ವದ ನಿರಾಕರಣೆಯನ್ನು ಸಾರಾಸಗಟಾಗಿ ತಳ್ಳಿಹಾಕದೇ, ಅವುಗಳನ್ನು ಪಡೆದರಷ್ಟೇ ತಾವು ಪುಣ್ಯವಂತರು, ಭಾಗ್ಯಶಾಲಿಗಳು ಎಂತೆಲ್ಲಾ ಭಾವಿಸುವವರಿಗೆ ಅವುಗಳನ್ನು ಅಪಮೌಲ್ಯಗೊಳಿಸುವ ವಿಚಾರವನ್ನು ಸರಳವಾಗಿ ನಿವೇದಿಸುತ್ತಾನೆ. ಬದಲಿಗೆ ಪ್ರತಿಯೊಬ್ಬರೂ ಅರ್ಜಿಸಬೇಕಾದ ಮೌಲ್ಯಯುತವಾದ ಜ್ಞಾನದ / ಅರಿವಿನ ಮಹತ್ತ್ವವನ್ನು ಈ ವಚನದ ಮೂಲಕ ತಿಳಿಸುತ್ತಾನೆ.

ಕಾಮಧೇನು ಕಟ್ಟಲು ಕೊಟ್ಟಿಗೆ ಬೇಕು, ಕಲ್ಪತರುವನ್ನು ನೆಡಲು ತಾವು ಬೇಕು. ಚಿಂತಾಮಣಿಯನ್ನು ಪಡೆದರೂ ಪ್ರಯೋಜನವಿಲ್ಲ, ಅದು ತಾನಾಗಿಯೇ ಏನನ್ನೂ ನೀಡುವುದಿಲ್ಲ. ನಮಗೆ ಬೇಕಾದುದನ್ನು ನಾವು ಅದರಿಂದ ಬೇಡಿಯೇ ಪಡೆಯಬೇಕು. ಈ ಭೌತಿಕ ವಸ್ತುಗಳು ಭಕ್ತರನ್ನು ಅವಲಂಬಿಸಿ, ಆಶ್ರಯಿಸಿದಾಗಷ್ಟೇ ತಮ್ಮ ಮಹತ್ತನ್ನು ಪ್ರಕಟಗೊಳಿಸಲು ಸಾಧ್ಯ. ಹಾಗಾಗಿ ಅವುಗಳ ಭ್ರಮೆಯಲ್ಲಿ ಮುಳುಗಿರುವವರಿಗೆ ಅದರ ನಿಸತ್ತ್ವವನ್ನು ಕುರಿತು ಅರಿತುಕೊಳ್ಳುವಂತೆ ಮಾಡುತ್ತದೆ ಈ ವಚನ.

ಆದರೆ ಮನದಲ್ಲಿ ಅರಿವಿನ ಸಂಗದಿಂದ ಮೂಡುವ ತಿಳಿವಳಿಕೆಯಿಂದಾಗಿ ಇಂತಹ ಕಲ್ಪಿತ ಸಂಗತಿಗಳ ಬಗೆಗೆ ಮೋಹವೇ ಇರುವುದಿಲ್ಲ. ಅಜ್ಞಾನವೆಂಬ ಕತ್ತಲಭೂತದಿಂದ ಜ್ಞಾನವೆಂಬ ಬೆಳಕಿನಲ್ಲಿ ವೈಚಾರಿಕವಾಗಿ ಆಲೋಚಿಸುವ ಮಂದಿಗೆ, ಇವುಗಳ ಗೊಡವೆಯ ಅಗತ್ಯವೇ ಇಲ್ಲ ಎಂಬ ಪರಮಸತ್ಯದ ಕಡೆಗೆ ಅರಿವಿನ ದೀವಿಗೆಯನ್ನು ತೋರುತ್ತಾನೆ.

ಬಯಲು, ಶಿವ, ಪರಶಿವ ಎಂಬ ಅರಿವು ತನ್ನೊಳಗಿನದು ಎಂಬುದನ್ನು ಈ ವಚನ ಬಲು ಸೊಗಸಾಗಿ ನಿರೂಪಿಸುತ್ತದೆ. ಅಜ್ಞಾನದ ಹೆಸರೇ ಮಾಯ. ಇದು ಮಾನವನನ್ನು ಸ್ವಾರ್ಥಿಯನ್ನಾಗಿಸುತ್ತದೆ. ಆಸೆಯೇ ದುಃಖಕ್ಕೆ ಮೂಲವಾಗಿ, ಲೋಭ, ಮದ, ಮತ್ಸರ ಮುಂತಾದ ಅರಿಷಡ್ವರ್ಗಗಳಿಗೆ ಕಾರಣವಾಗಿ ಮನುಷ್ಯನನ್ನು ಭವಸಾಗರದಲ್ಲಿ ಮುಳುಗಿಸುತ್ತದೆ. ಈ ಜಂಜಾಟದಲ್ಲಿ ಮಾನವ ತನ್ನೊಳಗಿನ ಅರಿವೆಂಬ ಲಿಂಗವನ್ನು ಮರೆಯುತ್ತಾನೆ.

ಆದ್ದರಿಂದಲೇ ಮೂರು ಲೋಕದ ಜೀವಿಗಳು ಹಪಹಪಿಸುವುದನ್ನು ಕಂಡು ಅರಿವಿನ ಮಾರಿತಂದೆ ಅವರ ಅಜ್ಞಾನದ ಬಗೆಗೆ ವ್ಯಥೆಪಡುತ್ತಾರೆ.

ಬಯಲು ಪರಶಿವನ ಸ್ವರೂಪವಾದರೆ, ಅದರಿಂದ ಸೃಷ್ಟಿಗೊಂಡ ರೂಪವೇ ಬ್ರಹ್ಮಾಂಡ, ಇದರಿಂದ ಹುಟ್ಟಿದ್ದೆ ಜೀವ. ಇದು ಪರಮಾತ್ಮನ ಅಂಶವನ್ನು ಹೊಂದಿದಂತಾಯಿತಲ್ಲವೇ? ಆತ್ಮ ತನ್ನೊಳಗನ್ನು ನೋಡುವುದೆಂದರೆ, ತನ್ನ ಸ್ವರೂಪವನ್ನು ನೋಡಿದಂತೆ, ಇದನ್ನು ತಿಳಿಯದ ಅಜ್ಞಾನಿಗಳಿಗೆ ಬಯಲಿನ ಅವಿನಾಸಂಬಂಧದ ನೈಜಸ್ವರೂಪವನ್ನು ಅರಿತು, ಆ ಪರತತ್ತ್ವವನ್ನು ತನ್ನೊಳಗೆ ಆವಾಹಿಸಿಕೊಳ್ಳುವುದೇ ಅರಿವು' ಎಂದು ನಮಗೆ ಅನುಭಾವದ ನೆಲೆಯಲ್ಲಿ ಪರಿಚಯಿಸುತ್ತಾರೆ ಅರಿವಿನ ಮಾರಿತಂದೆ.

●

## ಉಭಯಗಳ ದ್ವಂದ್ವವಳಿದ ಬೆಳಕು


**ಡಾ. ಜಿ.ಜಿ. ಹಿರೇಮಠ**

*ಪ್ರಾಂಶುಪಾಲರು,*
*ಸರಕಾರಿ ಪ್ರಥಮ ದರ್ಜೆ ಕಾಲೇಜು,*
*ಬಾದಾಮಿ. ೫೮೭೨೦೧.*
*ಮೊ; ೯೪೮೧೩೧೨೯೨೭*


ಹನ್ನೆರಡನೆಯ ಶತಮಾನದ ವಚನಕಾರರು ಸ್ಥಾವರ ವ್ಯವಸ್ಥೆಯೊಂದಿಗಿನ ಸಾಧನಾ ಪಥವನ್ನು ಜಂಗಮ ಪಥವಾಗಿಸಿಕೊಂಡ ಅನುಭಾವಿಗಳು. ಲೋಕವ್ಯವಸ್ಥೆಯ ವಸ್ತುಗಳನ್ನು ಮೀರಿ ತಮ್ಮ ಅಂತರಂಗದ ಅನುಭಾವದ ನೆಲೆಯನ್ನು ಶೋಧಿಸಿಕೊಂಡು ಬಾಹ್ಯ ವಸ್ತುಗಳನ್ನು ಮೀರಿದವರಾಗಿದ್ದ ಸಂಗತಿಗಳು ಅವರ ವಚನಗಳಲ್ಲಿ ವ್ಯಕ್ತವಾಗಿವೆ. ಅಂತೆಯೇ ಅವರು ತಮ್ಮ ಅರಿವಿನ ಅನುಭಾವದ ನೆಲೆಯೊಂದಿಗೆ ಶಿವಯೋಗದ ಪರಿಣಾಮವನ್ನು ಅನುಭಾವಿಸಿದವರು. ಅವರಲ್ಲಿ ಅರಿವಿನ ಮಾರಿತಂದೆಯು ಶಿವಯೋಗದ ಪಥವನ್ನು ಮತ್ತು ಗುರು-ಲಿಂಗ-ಜಂಗಮದ ಪರಿಕಲ್ಪನೆಯನ್ನು ವಿವರಿಸುತ್ತಾ ಶಿವಯೋಗ ಸಾಧನೆಯ ಮಹತ್ವದ ವಿಚಾರವನ್ನು ಈ ಕೆಳಗಿನ ವಚನದಲ್ಲಿ ವ್ಯಕ್ತವಾಗಿಸಿದ್ದನ್ನು ಕಾಣಬಹುದು.

ಈ ವಚನದಲ್ಲಿ ಪ್ರಸ್ತಾಪವಾಗಿರುವ ಕಾಮಧೇನು, ಕಲ್ಪತರು ಮತ್ತು ಚಿಂತಾಮಣಿ ಇವುಗಳು ಮನುಷ್ಯನ ಮನೋ-ಬಯಕೆಗಳನ್ನು ಇಡೇರಿಸುವ ಪ್ರಮುಖ ಸಾಧನಗಳು. ಆದರೆ ಇವು ಸ್ವತಂತ್ರವಾದವುಗಳಲ್ಲ ಇವುಗಳಿಗೆ ನೆಲೆ ಬೇಕು, ಹುಟ್ಟೂದಕ್ಕೆ ಭೂಮಿ ಬೇಕು ಮತ್ತು ತಾನು ಚಿಂತಿಸಿ ಬೇಡಬೇಕಾದ ಅನಿವಾರ್ಯತೆ ಇರುವುದನ್ನು ಇಲ್ಲಿ ಗುರುತಿಸುತ್ತಲೇ ಇವೆಲ್ಲವುಗಳಿಂದ ಸಿಗುವ ಫಲಗಳೆಲ್ಲವನ್ನು 'ಮನದರಿವಿಂಗೆ ಕೈಯ ಕುರುಹಿಂಗೆ' ಎನ್ನುವ ಪರಿಕಲ್ಪನೆಯಲ್ಲಿ ಕೈಯಲ್ಲಿನ ಲಿಂಗ ಮತ್ತು ಅರಿವಿನ ಸಂಯೋಗದಿಂದಾಗಿ ಮನದ ಮುಂದನ ಕತ್ತಲೆ, ಅಜ್ಞಾನಗಳೆಲ್ಲ ಅಳಿದು ಶಿವಯೋಗದ ಅನುಭಾವದ ಸ್ಥಿತಿಯಲ್ಲಿ ವ್ಯಕ್ತಿ ಕಾಮಧೇನು, ಕಲ್ಪತರು ಮತ್ತು ಚಿಂತಾಮಣಿಗಳು ನೀಡುವ ಫಲಗಳನ್ನು ಅನುಭವಿಸಲು ಸಾಧ್ಯವಾಗುವುದು. ಅದುವೇ ಸಲೆ ಸಂದು ತೋರಿ ನಿಜದ ಬೆಳಗಿನ ಅರಿವಿಗೆ ಕಾರಣವಾಗುತ್ತದೆ.

ಸಾಮಾನ್ಯವಾಗಿ ಕರ್ಮೇಂದ್ರಿಯಗಳು ಮತ್ತು ಜ್ಞಾನೇಂದ್ರಿಯಗಳು ನಮ್ಮ ಮನೋ-ಫಲಾಪೇಕ್ಷೆಯನ್ನು ನಿರ್ಧರಿಸುತ್ತವೆ. ಇವುಗಳನ್ನು ಆಧರಿಸಿ ಮನಸ್ಸು ಕಾಮ-ಕ್ರೋಧಾದಿ



ಅರಿಷಡ್ವರ್ಗಗಳನ್ನು, ಸುಖ-ದುಃಖ-ಆನಂದಂತಹ ಭಾವಗಳನ್ನು ತನ್ನ ದೃಷ್ಟಿಗೆ ಘೋಚರವಾದ, ಘೋಚರವಾಗುವ ಸಂಗತಿಗಳೊಂದಿಗೆ ಅನುಭವಿಸುವ ಮೂಲಕ ತನ್ನಲ್ಲಿ ಸಾರ್ಥಕವಾದ ಅನುಭೂತಿಗೆ ಒಳಗಾದಂತೆ ಭ್ರಮಿಸುತ್ತದೆ. ಹಾಗಾಗಿ ತಾನು ಅನುಭವಿಸುವ ಈ ಭಾವಗಳಿಗೆ ಬಾಹ್ಯ ಜಗತ್ತಿನಲ್ಲಿ ಘಟಿಸುವ ಘಟನೆಗಳನ್ನು ಆಧರಿಸಿ ಕರ್ಮದಲ್ಲಿ ತೊಡಗಿಕೊಳ್ಳುವ ಕ್ರಮವು ಒಂದು. ಮತ್ತೊಂದು ಶರಣರು ಕಂಡುಕೊಂಡ ಮಾರ್ಗಗಳಲ್ಲಿ ಕಾಯಕ-ದಾಸೋಹ ಮತ್ತು ಶಿವಯೋಗ ಸಾಧನಗಳು ಪ್ರಮುಖವಾದವುಗಳು. ಪ್ರಸ್ತುತ ವಚನದಲ್ಲಿ ಅರಿವಿನ ಮಾರಿತಂದೆಯು ಶಿವಯೋಗ ಸಾಧನೆಗೆ ಹೆಚ್ಚು ಮಹತ್ವವನ್ನು ಕೊಟ್ಟಿರುವ ಅಂಶವು ಇಲ್ಲಿ ವ್ಯಕ್ತವಾಗಿದೆ. ನಮ್ಮ ಅಜ್ಞಾನ-ಜ್ಞಾನ-ತಿಳುವಳಿಕೆ-ಗ್ರಹಿಕೆ ಮತ್ತು ಅರಿವುಗಳು ಅನುಭಾವದ ಸ್ಥಿತಿಯನ್ನು ಹೆಚ್ಚಿಸಿ ಐಕ್ಯಸ್ಥಲದಲ್ಲಿ ಮನಸ್ಸು ನೆಲೆಗೊಂಡಾಗ ಭಾವ ಶೂನ್ಯವಾಗಿ ನಿರ್ಭಾವ-ನಿಶೂನ್ಯವಾಗಿ ಅನಂತ ಶಕ್ತಿಯೊಂದಿಗೆ ಒಂದಾಗುವ ಕ್ರಿಯೇಯೆ ಶಿವಯೋಗ ಸಾಧನವೆನಿಸುವುದು. ಆಗ 'ಹಿಂದಳ ಕತ್ತಲೆಯ ಮುಂದಳ ಬೆಳಗಿನ ಉಭಯದ ಸಂಧಿಯಲ್ಲಿಸಲೆ ಸಂದು ತೋರುತ್ತದೆ ನಿಜದ ಬೆಳಗು ತೋರುತ್ತದೆಸದಾಶಿವಮೂರ್ತಿಲಿಂಗದಲ್ಲಿ' ಎನ್ನುವ ಈ ವಚನದ ತಾತ್ಪರ್ಯವು ಮನವು ಮಹಾದೇವನ ಅಂಶವಾಗುವುದನ್ನು ಪ್ರತಿಪಾದಿಸುತ್ತದೆ.

ಇಂದಿನ ಧಾವಂತದ ಜಾಹಿರಾತಿನ ಬದುಕಿನಲ್ಲಿ ಮನಸ್ಸು ಪ್ರತಿಯೊಂದಕ್ಕೂ ಬಾಹ್ಯ ವಸ್ತುಗಳನ್ನೇ ಅವಲಂಭಿಸಿ ಸುಖವನ್ನೇ ಬೆನ್ನು ಹತ್ತಿರುವಾಗ ತನ್ನ ಆಂತರ್ಯದೊಳಗೆ ಅಡಗಿರುವ ಆನಂದದ ಭಾವವನ್ನು ಅನುಭಾವಿಸದ ಕಾರಣ ಕರ್ಮಸಿದ್ಧಾಂತದಲ್ಲಿಯೇ ಹೆಚ್ಚುಗಾರಿಕೆಯನ್ನು ಪಡೆದುಕೊಂಡು ತೊಳಲಾಡುತ್ತದೆ. ಆ ಪರಿಣಾಮದಿಂದಾಗಿ ಕೋಪ-ತಾಪ-ಒತ್ತಡಗಳನ್ನು ಅನುಭವಿಸುತ್ತಾ ಭವ-ಬಂಧನಗಳ ಬಾಧೆಗಳಿಗೆ ಒಳಗಾಗುತ್ತದೆ. ಹಾಗಾಗಿ ಕಾಮಧೇನು-ಕಲ್ಪವೃಕ್ಷ-ಚಿಂತಾಮಣಿಗಳ ಆಶ್ರಯವನ್ನು ಪಡೆಯಲು ಮನಸ್ಸು ಹಾತೊರೆಯುತ್ತದೆ. ಆದರೆ ಇವೆಲ್ಲವುಗಳು ನೀಡಬಹುದಾದ ಫಲವನ್ನು ಕೇವಲ ಶಿವಯೋಗವೊಂದರಿಂದಲೆ ಪಡೆದುಕೊಳ್ಳುವ ವಿಚಾರವು ಇಲ್ಲಿ ವ್ಯಕ್ತವಾಗಿದೆ.

●



**ನಲ್ಲನೊಲ್ಲನೆಂದು ಮುನಿದು ನಾನಡಗಲು**
**ಅಡಗುವ ಎಡೆಯೆಲ್ಲಾ ತಾನೆ**
**ನೋಡೆಲಗವ್ವಾ**
**ನಲ್ಲ ನೀನಿಲ್ಲದೆಡೆಯಿಲ್ಲ**
**ಅಡಗಲಿಕಿಂಬಿಲ್ಲಾಗಿ ಮುನಿದು ನಾನೇಗುವೆನು**
**ಶರಣುಗತಿವೋಗುವೆನು ಉರಿಲಿಂಗದೇವನ**

# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ

**ಡಾ. ಬಿ.ವಿ. ವಸಂತಕುಮಾರ್**

*ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ,*
*ಹಾಗೂ ಕನ್ನಡ ಸಹ ಪ್ರಾಧ್ಯಾಪಕರು, ಕನ್ನಡ*
*ಸ್ನಾತಕೋತ್ತರ ಅಧ್ಯಯನ ಕೇಂದ್ರ,*
*ಮಹಾರಾಣಿ ಮಹಿಳಾ ಕಲಾ ಕಾಲೇಜು,*
*ಮೈಸೂರು ೯೭೩೧೪ ೭೫೯೦೧*

ಡಾ. ಬಿ.ವಿ. ವಸಂತಕುಮಾರ್ ಅವರು ವಿಮರ್ಶಕರು, ಚಿಂತಕರು ಹಾಗೂ ಕನ್ನಡ ಪ್ರಾಧ್ಯಾಪಕರು. ಪ್ರಸ್ತುತ ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿಯೂ ಕಾರ್ಯನಿರ್ವಹಿಸುತ್ತಿದ್ದಾರೆ. ಆಳವಾದ ಓದು, ಸೂಕ್ಷ್ಮವಾದ ಒಳನೋಟಗಳು ಹಾಗೂ ಖಚಿತವಾ ನಿಲುವುಗಳಿಗೆ ಇವರು ಹೆಸರುವಾಸಿಯಾಗಿದ್ದಾರೆ. ಹಳೆಗನ್ನಡ, ವಚನ ಸಾಹಿತ್ಯ ಹಾಗೂ ಆಧುನಿಕ ಸಾಹಿತ್ಯ ಇವರ ಪ್ರಮುಖ ಆಸಕ್ತಿಯ ಕ್ಷೇತ್ರಗಳು. ಸಾಮಾಜಿಕ ಹಾಗೂ ಸಾಂಸ್ಕೃತಿಕ ಪಲ್ಲಟಗಳಿಗೆ ಇವರದು ಸದಾ ತೆರೆದ ಮನಸ್ಸು. ಅನೇಕ ಕೃತಿಗಳನ್ನು ರಚಿಸಿದ ಹೆಗ್ಗಳಿಕೆ ಇವರದು. ದಾಸಿಮಯ್ಯನನ್ನು ಕುರಿತ ಇವರ ಕೃತಿಯು ಅದರ ಹೊಸತನಕ್ಕಾಗಿ ಪ್ರಖ್ಯಾತವಾಗಿದೆ.

**೧. ಶರಣ ಚಳುವಳಿಯನ್ನು ಮತ್ತೆ ನಿರೀಕ್ಷಿಸಬಹುದೆ?**

**ಉತ್ತರ:** ಶರಣ ಚಳುವಳಿ ಎಂದೋ ಮುಗಿದ ಚಳುವಳಿ ಎಂದು ನಾವು ಯೋಚಿಸಿದಾಗ ಮಾತ್ರ ಮತ್ತೆ ನಿರೀಕ್ಷಿಸಬಹುದೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ? ಶರಣ ಚಳುವಳಿ ಎಂಬುದು ೧೨ನೆಯ ಶತಮಾನದ ಚಳುವಳಿ ಎಂದು ಕಾಲದ ದೃಷ್ಟಿಯಿಂದ ಗ್ರಹಿಸಿದರೂ ಅದರ ಆಶಯಗಳ ನೆಲೆಯಲ್ಲಿ ಚಳುವಳಿಯನ್ನು ಗ್ರಹಿಸಿದಾಗ ಅದು ನಿರಂತರವಾಗಿ ನಡೆಯುತ್ತಿರುವ ಚಳವಳಿ ಎನಿಸುತ್ತದೆ. ಉಪನಿಷತ್ತುಗಳ ಕಾಲದಿಂದ ಹಿಡಿದು ಮಹಾತ್ಮಾಗಾಂಧೀಜಿ ಬಾಬಾಸಾಹೇಬ ಅಂಬೇಡ್ಕರ್ ಅವರನ್ನೂ ಒಳಗೊಂಡಂತೆ ಸ್ವಾತಂತ್ರ್ಯೋತ್ತರ ಭಾರತದ ಸಂವಿಧಾನ ತಂದಿರುವ ತರುತ್ತಿರುವ ಬದಲಾವಣೆಗಳೆಲ್ಲವೂ ಶರಣ ಚಳವಳಿ ಎಂದೇ ಅನುಭವ ವೇದ್ಯವಾಗುತ್ತವೆ. ಆದ್ದರಿಂದ ಶರಣ ಚಳವಳಿ ಮತ್ತೆ ಮತ್ತೆ ನಿರೀಕ್ಷಿಸಲೇಬೇಕಾದ ಮಾತ್ರವಲ್ಲ ಸ್ವತಃ ನಡೆಸಲೇಬೇಕಾದ ಚಳವಳಿ. ಅದು ನಡೆ–ನುಡಿ ಸಿದ್ಧಾಂತದ ಚಳುವಳಿ.



**೨. ಶರಣ ಚಳುವಳಿಯನ್ನು ಆರಾಧನಾ ನೆಲೆಯಿಂದ ನೋಡುತ್ತಿರುವುದೇ ಅದರ ಪ್ರಾಯೋಗಿಕ ನೆಲೆಗಳ ಅಳವಡಿಕೆಗಿರುವ ತೊಡಕು ಎನ್ನಬಹುದೆ?**

**ಉತ್ತರ:** ಇಲ್ಲ. ಆರಾಧನಾ ನೆಲೆಯಿಂದ ನೋಡುತ್ತಿರುವುದರಿಂದಲೇ ಇಂದಿಗೂ ಶರಣರು, ಶರಣ ಚಳವಳಿ ಹಾಗೂ ಆಶಯಗಳು ಬೆಳೆದುಬಂದಿದೆ. ಆದರೆ ಹುಟ್ಟಿನಿಂದ ಶರಣರೆಂದು ತೀರ್ಮಾನಿಸಿಕೊಳ್ಳುವುದೇ ತೊಡಕು ಎನಿಸುತ್ತದೆ. 'ಶರಣ' ಎಂಬುದು ಸಾಧನೆಯಿಂದ ಪಡೆಯಬೇಕಾದ ಅಂತರಂಗ ಬಹಿರಂಗ ಶುದ್ಧಿಯ ನಿರಂತರ ಕ್ರಿಯೆ ಎಂದು ತಿಳಿದಾಗ ಮಾತ್ರ 'ಶರಣ'ರಾಗುವ ಚಳವಳಿ ಪ್ರಾಯೋಗಿಕ ನೆಲೆಯನ್ನು ಪಡೆಯುತ್ತಿದೆ. ಹುಟ್ಟಿನಿಂದಲೇ ಯಾವುದು ನಿರ್ಧರಿಸಲ್ಪಡುವುದೋ ಅದು ಜಾತಿ ಎನಿಸಿಕೊಳ್ಳುತ್ತದೆಯೇ ವಿನಃ ಧರ್ಮ ಅಥವಾ ದಯೆ ಎನಿಸಿಕೊಳ್ಳುವುದಿಲ್ಲ. ಶರಣ ಚಳವಳಿಯನ್ನು ಜಾತಿಯ ನೆಲೆಯಿಂದ ನೋಡುತ್ತಿರುವುದೇ ತೊಡಕು. ಆರಾಧನೆ ಅರಿವಿನಿಂದ ಕ್ರಿಯೆಯಿಂದ ಕೂಡಿದಾಗ ಮಾತ್ರ ಆರಾಧನೆ. ಅದು ಎಂದಿಗೂ ತೊಡಕಲ್ಲ.

**೩. ಶರಣ ಚಳುವಳಿಯ ಮುಕ್ತತೆಯೇ ಕಳೆದುಹೋಗಿ, ಅದನ್ನು ಸಂಸ್ಥೀಕರಿಸುವ ಪ್ರಯತ್ನಗಳೇ ಮುಂಚೂಣಿಗೆ ಬಂದಿವೆ ಎನ್ನುವ ಅಭಿಪ್ರಾಯವನ್ನು ನೀವು ಒಪ್ಪುತ್ತೀರಾ?**

**ಉತ್ತರ:** ಇಲ್ಲ ಒಪ್ಪುವುದಿಲ್ಲ. ಸಂಸ್ಥೆ ಎಂಬುದು ವಚನ ಚಳವಳಿಯನ್ನು ಅನುಷ್ಠಾನಕ್ಕೆ ತರುವುದಕ್ಕಿರುವ ಒಂದು ವ್ಯವಸ್ಥೆ. ಕೆಲವರು ಮಾತ್ರ ಸಂಸ್ಥೆ ಎಂಬುದನ್ನು ಅಪರಾಧ ಎಂದು ನೋಡುವುದನ್ನು ಕಾಣಬಹುದು. ಅಂದಿನ ಮಹಾಮನೆಯೂ ಶೂನ್ಯಸಿಂಹಾಸನವೂ ಒಂದು ಸಂಸ್ಥೆ ಎಂಬುದನ್ನು ನಾವು ಮರೆಯಬಾರದು. ಆಧುನಿಕ ಸಂದರ್ಭದಲ್ಲಿ ಶರಣ ಚಳವಳಿಯ ಆಶಯವನ್ನು ಅನುಷ್ಠಾನಕ್ಕೆ ತರುವ ಪ್ರಯತ್ನ ಸಿದ್ಧಗಂಗೆ, ಸುತ್ತೂರು, ಸಿರಿಗೆರೆ ಮೊದಲಾದ ಮಠಗಳಲ್ಲದೆ ಹಲವು ಸಂಘಸಂಸ್ಥೆಗಳು, ಸರ್ಕಾರಗಳು, ಶಾಲಾ–ಕಾಲೇಜುಗಳು ತಮ್ಮ ತಮ್ಮ ನೆಲೆಯಲ್ಲಿ ಜಾರಿಗೊಳಿಸುತ್ತಿವೆ. ಧರ್ಮವನ್ನು ಅಫೀಮು ಎಂದು ಭಾವಿಸುವ ಮಾರ್ಕ್ಸ್‌ವಾದಿಗಳಿಗೆ ಮಾತ್ರ 'ಸಂಸ್ಥೆ' ಬಂಧನವಾಗಿ ಕಾಣುತ್ತದೆ. ಆದರೆ 'ಸಂಸ್ಥೆ' ಆಶಯಗಳನ್ನು ಜಾರಿಗೆ ತರುವಂಥ ಸಾಧನ. ಆದರೆ ಆಶಯಗಳನ್ನು ಕಳೆದುಕೊಂಡಾಗ ಅದು 'ಸಂಸ್ಥೆ'ಯಾಗದೆ ಸಂಸ್ಥೆಯ ಹೆಸರಲ್ಲಿರುವ ಜಡತ್ವವಾಗುತ್ತದೆ. 'ಮುಕ್ತತೆ ಎಂದರೆ ಸ್ವೇಚ್ಛಾಚಾರವಲ್ಲ. ಅದು ಸ್ವಾತಂತ್ರ್ಯ. ಸ್ವಾತಂತ್ರ್ಯ ಎಂದರೆ ಸ್ವಯಂ ನಿಯಂತ್ರಣ, ಸ್ವಯಂ ವಿಕಾಸ, ಅದೊಂದು ರೀತಿ ಬಳ್ಳಿಯ ಬಂಧನದಲ್ಲಿ ಹೂವು ಅರಳಿ ಪರಿಮಳವಾಗಿ ಪಸರಿಸುವ ಬಗೆ. ಸಂಸ್ಥೆ ಎಂದರೆ ಹೂವಿಗೆ ಬಳ್ಳಿಯಂತೆ ಇರಬೇಕೇ ಹೊರತು ಕಲ್ಲು ಚಪ್ಪಡಿಯನ್ನು ಹೇರಿದಂತೆ ಆಗಬಾರದು. ಸಂಸ್ಥೀಕರಣ ಮಹಾಮನೆಯಂತಿದ್ದಾಗ ಶರಣ ಚಳವಳಿಯ ಮುಕ್ತತೆಗೆ ಭಂಗ ಬರುವುದಿಲ್ಲ. ಆಶಯಗಳನ್ನು ಕಳೆದುಕೊಂಡ ಸಂಸ್ಥೆಯನ್ನು ಸಂಸ್ಥೆ ಎಂದು ಕರೆಯಲಾಗದು. ಅರಾಜಕತೆ, ಸ್ವೇಚ್ಛಾಚಾರವನ್ನೇ ಮುಕ್ತತೆ ಎಂದು ಹೇಳಲಾಗದು. ಆದ್ದರಿಂದ ಶರಣ ಚಳವಳಿಯ ಅನುಷ್ಠಾನಕ್ಕೆ ಸಂಸ್ಥೆ ಬೇಕು. ಸಂಸ್ಥೆಯನ್ನು ಜಡಗೊಳಿಸುವುದಕ್ಕೆ ಶರಣಚಳವಳಿಯ ಮುಖವಾಡ ಧರಿಸಲಿಕ್ಕಿಲ್ಲ. ಆದ್ದರಿಂದ ಸಂಸ್ಥೀಕರಣ ಮುಕ್ತತೆಗಾಗಿ ಆಗಬೇಕು.

**೪. ದಲಿತ ಸಂಕಥನಕ್ಕೆ ಶರಣ ಚಳುವಳಿಯ ಕೊಡುಗೆಗಳು:**

**ಉತ್ತರ:** ಈ ವಾಕ್ಯವನ್ನು ಬದಲಿಸಬೇಕು. ಶರಣ ಚಳವಳಿಯ ದಲಿತ ಸಂಕಥನದ ಕೊಡುಗೆ. ೧೧ ಹಾಗೂ ೧೨ನೆಯ ಶತಮಾನದ ಶರಣ ಚಳುವಳಿಯು ಅಂದಿನ ದಲಿತರು ಕಟ್ಟಿದ ಚಳವಳಿ ಎಂಬುದು ಗಮನಾರ್ಹ ಆದ್ಯವಚನಕಾರ ದೇವರದಾಸಿಮಯ್ಯ ಜೇಡರವನು, ಮಾದಾರ ಚೆನ್ನಯ್ಯ ಮಾದರವನು, ಡೋಹಾರ ಕಕ್ಕಯ್ಯ ಡೋಹರವನು, ಉದ್ದಬಯ್ಯ, ಓಹಿಲಯ್ಯ ಮೊದಲಾದವರು "ಕೀಳಿಂಗಲ್ಲದೆ ಹಯನು ಕರೆಯದು" ಎಂದು ಸಾರುವ ಮೂಲಕ ಹುಟ್ಟಿನಿಂದ ಶ್ರೇಷ್ಠ ಎಂದು ತಿಳಿದವರ ಅಜ್ಞಾನವನ್ನು ದೂರಗೊಳಿಸಿ ಸುಜ್ಞಾನಕ್ಕೆ ತಂದವರು. ಹಾಗಾಗಿ ಶರಣಚಳವಳಿಯೇ ದಲಿತರ ಕೊಡುಗೆ. ಅದು ಮುಂದೆ ಮೇಲು-ಕೀಳುಗಳನ್ನು ಮೀರಿ ಶಿವಭಕ್ತರಾಗಿ ಸೇರಿ ಮಹಾಮನೆಯಾಗಿ ಶರಣಚಳವಳಿ ವೀರಶೈವ ಲಿಂಗಾಯತದ ಮೂಲಕ ಮಧ್ಯಕಾಲೀನ ಭಾರತದ ಪುನರುತ್ಥಾನಕ್ಕೆ ಕಾರಣವಾಗಿ ವಿಜಯನಗರ ಸಾಮ್ರಾಜ್ಯಕ್ಕೆ ಕಾರಣವಾಗಿದೆ. ಘಜ್ನಿಯ ದಾಳಿಯ ಲಿಂಗಭಂಜನೆಯನ್ನು ತಡೆದಿದೆ. ಭಂಜಿಸಲಾಗದ ದೇಹವೇ ದೇವಾಲಯವೆಂಬ ಬಯಲ ಮೂರ್ತಿಗಳನ್ನು ರೂಪಿಸಿದೆ. ಇದು ಅಂದಿನ ದಲಿತರ ಅಧ್ಯಾತ್ಮ. ಅದೇ ಶರಣ ಚಳುವಳಿಯಾದ ಕಾರಣ ೨೧ನೆಯ ಶತಮಾನದಲ್ಲಿಯೂ ಮತ್ತೆ ಮತ್ತೆ ದಲಿತರ ಬದುಕಿನ ಸಾಂಸ್ಕೃತಿಕ ಅಸ್ಮಿತೆಯ ಬೆಳಕು ಶರಣರಲ್ಲಿ ಗೋಚರಿಸಿದೆ. 'ಇವ ನಮ್ಮವ ಇವ ನಮ್ಮವ' ಎಂಬ ಬಸವ ಪ್ರಜ್ಞೆ ದಲಿತ ಸಂಕಥನಕ್ಕೆ ಅನ್ನ-ಅರಿವು-ಆನಂದಗಳ ಕಾಯಕ ದಾಸೋಹ ಕಲ್ಯಾಣಗಳ ಶಿವತ್ವವನ್ನು ಕೊಡುಗೆಯಾಗಿ ನೀಡಿದೆ. ಆದರೆ ಹುಟ್ಟಿನಿಂದಾದ ಜಾತಿ ಪ್ರಜ್ಞೆ 'ಮಹಾಮನೆ' ಕಟ್ಟುವುದಕ್ಕೆ ಅಡ್ಡಿಯಾಗಿದೆ. ಬಸವಣ್ಣನ ಶಿವ ಮಾದಾರ ಚೆನ್ನಯ್ಯನ ಮನೆಗೆ ಬರಬೇಕಾದ ಅಗತ್ಯವಿದೆ. ನಟುವರ ಅಲ್ಲಮನನ್ನು ಶೂನ್ಯ ಸಿಂಹಾಸನದ ಅಧ್ಯಕ್ಷನನ್ನಾಗಿ ಮಾಡಿದ ಸಂಕಥನ ಮರುಕಳಿಸುವ ದಿನ ಬಂದಾಗ ದಲಿತ ಸಂಕಥನಕ್ಕೆ ಶರಣ ಚಳವಳಿಯ ಕೊಡುಗೆಗಳಿಗೆ ಪರಿಪೂರ್ಣತೆ ಪ್ರಾಪ್ತವಾಗುತ್ತದೆ. ಅದಕ್ಕೆ ಎಲ್ಲ ಜಾತಿ-ಮತ-ಧರ್ಮಗಳವರಲ್ಲಿ 'ಶರಣ'ರಾಗುವ ಪ್ರಕ್ರಿಯೆ ಆಗಬೇಕಿದೆ.

**೫. ಶರಣರ ಸಮುದಾಯದ ಪರಿಕಲ್ಪನೆ ಯಾವುದು? ಅದಕ್ಕೊಂದು ಸಮಗ್ರತೆ ಇದೆಯೇ?**

**ಉತ್ತರ:** 'ಶರಣ' ಎಂಬುದು ಭಕ್ತನಾಗುವುದರಿಂದ ಮೊದಲಾಗಿ ಮಹೇಶತ್ವಕ್ಕೆ ಅರ್ಪಣೆಗೊಂಡು ಅಧಿವ್ಯಾಧಿಗಳನ್ನು ಕಳೆದುಕೊಂಡ ಪ್ರಸಾದಿಯಾಗಿ ಅಲ್ಲಿ ಪ್ರಾಣವೇ ಲಿಂಗವಾಗಿ ಭಕ್ತಿಭಾವಜಾತ ಶರಣನ ಮನದ ಮೊನೆಯ ಮೇಲೆ ಶಿವ ಅಡಗಿರುವುದಾಗಿದೆ. ಅಂಥ ವಿಕಸಿತ ಆತ್ಮಗಳ ಸಮುದಾಯವೇ ಶರಣ ಸಮುದಾಯ. ಬ್ರಾಹ್ಮಣ ಮೊದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲಾ ಒಂದೇ ಎಂಬುದು ಶರಣ ಸಮುದಾಯದ ಪರಿಕಲ್ಪನೆ. ಶರಣ ಎಂಬುದು ಹುಟ್ಟಿನಿಂದ ಬರುವ ಬಿಟ್ಟಿ ಅಧಿಕಾರವಲ್ಲ. ನಡೆ-ನುಡಿಗಳನ್ನೂ ಒಂದಾಗಿಸಿಕೊಳ್ಳುವುದರಿಂದ ಸಾಧಿಸುವ ಅಂತರಂಗ ಬಹಿರಂಗ ಶುದ್ಧಾಯ ಅನುಭಾವ. ಶರಣ ಸಮುದಾಯದ ಪರಿಕಲ್ಪನೆಯ ಕಾಯಕ-ದಾಸೋಹ-ಅನುಭಾವಗಳಿಂದ ರೂಪಗೊಂಡದ್ದಾಗಿದೆ. ಇಷ್ಟಲಿಂಗ ಗುರುಲಿಂಗ ಜಂಗಮತ್ವಗಳು ಶರಣರನ್ನಾಗಿಸುವ ಮಾರ್ಗಗಳು ಸಂಸ್ಥೆಗಳು ಕ್ರಿಯೆಗಳು ಪರಿಣಾಮಗಳು.



ಶರಣರ ಸಮುದಾಯದ ಪರಿಕಲ್ಪನೆಗೆ ಒಂದು ಸಮಗ್ರತೆ ಇದೆ. ಭವಿಗಳಿಗಾಗಿಯೇ ಶರಣ ಚಳವಳಿ. ಹಾಗಾಗಿ ಭಕ್ತರಿಗಾಗಿ ಸೀಮಿತವಾಗಿದ್ದರೆ ಅದಕ್ಕೆ ಸಮಗ್ರತೆ ಬರುತ್ತಿರಲಿಲ್ಲ. ಭವಿಗಳಿಗಾಗಿಯೇ ಇರುವುದರಿಂದ ಭವಿಗಳನ್ನು ಭಕ್ತರನ್ನಾಗಿಸುವ ಮೂಲಕ ಶರಣ ಸಮುದಾಯವನ್ನು ರೂಪುಗೊಳಿಸುವುದರಿಂದ ಸಮಗ್ರತೆ ಪ್ರಾಪ್ತವಾಗಿದೆ. ಭವಿಗಳನ್ನು ಒಳಗೊಳ್ಳದಿದ್ದರೆ, ಸಮಗ್ರತೆಯಿಲ್ಲ. ಭಕ್ತರೇ ಭವಿಗಳಾಗಿಬಿಟ್ಟರೆ ಅದು ಶರಣ ಸಮುದಾಯವೇ ಅಲ್ಲ. ಭವಿ ಎಂದರೆ ಅಂಗದ ಮೇಲೆ ಲಿಂಗ ಇಲ್ಲದವರಲ್ಲ ಭವಿ ಎಂದರೆ ಕಾಮ ಕ್ರೋಧಾದಿಗಳಿಂದ ಬಂಧನಕ್ಕೆ ಸಿಲುಕಿ ನರಲುತ್ತಿರುವವರು.ಅದನ್ನು ಅಕ್ಕಮಹಾದೇವಿ ತನ್ನ ವಚನವೊಂದರಲ್ಲಿ ಸ್ಪಷ್ಟಪಡಿಸಿದ್ದಾಳೆ. ಶರಣ ಸಮುದಾಯ ಹುಟ್ಟಿನಿಂದ ರೂಪುಗೊಳ್ಳುವ ಪರಿಕಲ್ಪನೆಯದ್ದಲ್ಲ.

**೬. ಲಿಂಗನ್ಯಾಯದ ಪರಿಕಲ್ಪನೆ ಶರಣರಲ್ಲಿ ಸ್ಪಷ್ಟವಾಗಿ ಬೇರೂರಿತ್ತು ಎಂದು ನಿಮಗನಿಸುತ್ತದೆಯೇ?**

**ಉತ್ತರ:** ಹೌದು, ಲಿಂಗನ್ಯಾಯದ ಪರಿಕಲ್ಪನೆ ಶರಣರಲ್ಲಿ ಸ್ಪಷ್ಟವಾಗಿ ಬೇರೂರಿತ್ತು. ಅದು ಆಧುನಿಕ ಸಂದರ್ಭದ ಪಾಶ್ಚಾತ್ಯ ಪರಿಕಲ್ಪನೆಯ ಸ್ತ್ರೀವಾದದಂತದ್ದಲ್ಲ. ಅದು ದೇವರದಾಸಿಮಯ್ಯನ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ ಎಂಬ ನೆಲೆಯದ್ದು. ಅದು ಅಕ್ಕಮಹಾದೇವಿಯ 'ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ ಗಂಡು ಗಂಡಾದಡೆ ಹೆಣ್ಣಿನ ಸೂತಕ' ಎಂಬ ಹೆಣ್ಣು ಗಂಡು ಪ್ರಜ್ಞೆಯನ್ನೂ ಮೀರಿದ ಲಿಂಗನ್ಯಾಯದ ಪರಿಲ್ಪನೆ. ಸಾವಿಲ್ಲದ ಕೇಡಿಲ್ಲದ ಚಲುವಂಗೆ ಒಲಿಯುವ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಡುವ ನೆಲೆಯದ್ದಾಗಿದೆ. ಈ ಲಿಂಗನ್ಯಾಯ ಲಿಂಗಸಾಮರಸ್ಯದಿಂದ ಸಂಭವಿಸುವಂಥದ್ದು. ಅದು ಶರಣರಲ್ಲಿ ಸ್ಪಷ್ಟವಾಗಿ ಬೇರೂರಿತ್ತು.

**೭.ವಚನಕಾರ್ತಿಯರ ಹೋರಾಟಕ್ಕೆ ಪ್ರತ್ಯೇಕ ಅಸ್ತಿತ್ವ ಇದೆಯೇ?**

**ಉತ್ತರ:** ಪ್ರತ್ಯೇಕ ಅಸ್ತಿತ್ವವಿದೆ ಆದರದು ಪ್ರತ್ಯೇಕತೆಗಾಗಿ ಅಲ್ಲ. ಐಕ್ಯತೆಗಾಗಿ ವಚನಕಾರ್ತಿಯರ ಭಾವ-ಬುದ್ಧಿ-ಮಾತು-ಕೃತಿಗಳಲ್ಲಿ ಅವರ ಹೋರಾಟದ ಪ್ರತ್ಯೇಕ ಅಸ್ತಿತ್ವ ಗುರುತಿಸಬಹುದು. ಆದರೆ ಅದು ಒಟ್ಟಾರೆ ಶರಣ ಚಳವಳಿಯ ಅವಿಭಾಜ್ಯ ಭಾಗವಾದ ಅಸ್ತಿತ್ವ ಅಕ್ಕಮಹಾದೇವಿ-ಅಲ್ಲಮಪ್ರಭುಗಳ ಹೋರಾಟದ ದಾರಿ ಪ್ರತ್ಯೇಕ ಅಸ್ತಿತ್ವಗಳಂತೆ ಮೇಲ್ನೋಟಕ್ಕೆ ಕಂಡುಬಂದರೂ, ಕಟ್ಟಕಡೆಗೆ ಕದಳಿಯ ಬನದಲ್ಲಿ ಬಟ್ಟಬಯಲಾಗುವ ಬಗೆ ಈ ಪ್ರತ್ಯೇಕ ಅಸ್ತಿತ್ವದ ಐಕ್ಯತ್ವ.

**೮.ನಿಮಗೆ ಪ್ರಿಯರಾದ ವಚನಕಾರರು ಹಾಗೂ ವಚನಕಾರ್ತಿಯರನ್ನು ಕುರಿತು ವಿವರವಾಗಿ ಹೇಳಿ.**

**ಉತ್ತರ:** ನನಗೆ ಅಲ್ಲಮ ಮತ್ತು ಅಕ್ಕ ಅತ್ಯಂತ ಪ್ರಿಯರಾದವರು. ಅವರು ತಮ್ಮ ತಮ್ಮ ಸತ್ಯಗಳ ಹುಡುಕಾಟಗಳಿಂದ ಶರಣರಾದವರು. ಬುದ್ಧಿ ಭಾವಗಳ ವಿದ್ಯುದಾಲಿಂಗನದಂತವರು. ಶಿವ-ಶಿವೆಯ ಸ್ವರೂಪಿಗಳು. ಅಲ್ಲಮ ಗುರುವಾಗಿ, ತಂದೆಯಾಗಿ ಕೈಹಿಡಿದು ನಡೆಸಿದರೆ, ಅಕ್ಕ ಹೆಣ್ಣಾಗಿ, ತಾಯಿಯಾಗಿ, ಪ್ರೀತಿಯ ಬೆಳಕಾಗಿ ಬೆರಗುಗೊಳಿಸುತ್ತಾಳೆ.

ಅಲ್ಲಮ ಆಕಾಶವೆನಿಸಿದರೆ, ಅಕ್ಕ ಭೂಮಿಯೆನಿಸುತ್ತಾಳೆ. ಶಿಕಾರಿಪುರ ತಾಲ್ಲೂಕಿನ ಉಡುತಡಿ-ಬಳ್ಳಿಗಾವೆಯ ಪರಿಸರದಲ್ಲಿ ಹನ್ನೊಂದು ವರ್ಷ ಅಧ್ಯಾಪಕನಾಗಿ ಬದುಕಿದ

ನನಗೆ ಇವರಿಬ್ಬರು ತಾಯ್ತಂದೆಯರು, ಗೆಳೆಯ–ಗೆಳತಿಯರು, ಗುರುದ್ವಯರು, ಬೆಳಕಿನ ಭಾವದ ಬೆರಗುಗಳು. ಅಲ್ಲಮನ ಮದ್ದಳೆಯ ವಾದ್ಯ ಅಕ್ಕನ ಗಿಳಿಗಳೊಡನೆಯ ಸಂಭಾಷಣೆ ಮಾತೆಂಬ ಜ್ಯೋತಿರ್ಲಿಂಗವಾಗುವ ಪರಿ ವಿಸ್ಮಯವನ್ನುಂಟುಮಾಡುತ್ತದೆ. ದೇವರದಾಸಿಮಯ್ಯ ಅಥವಾ ಜೇಡರ ದಾಸಿಮಯ್ಯ ಇಡೀ ವಚನ ಚಳವಳಯ ಪ್ರವರ್ತಕ ಉದ್ಘಾಟಕ ಎಂಬುದು ಇಷ್ಟಕ್ಕೆ ಕಾರಣವಾದರೆ ಲಂಚವಂಚನೆಗೆ ಕೈಯಾನದ ಶರಣೆ ಸತ್ಯಕ್ಕ ಆದರ್ಶ ಪ್ರಾಯಳಾಗುತ್ತಾಳೆ. ಈ ಎಲ್ಲಾ ಆಲೋಚನೆ–ಭಾವನೆ–ಯೋಜನೆಗಳನ್ನು ಅರಮನೆಯಲ್ಲಿಯ ಮಹಾಮನೆ ಕಟ್ಟಿ ಅನುಷ್ಠಾನಕ್ಕೆ ತಂದ ಭಕ್ತಿ ಭಂಡಾರಿ ಬಸವಣ್ಣ ಜನನಾಯಕನಾಗುವ ಪರಿಯಿಂದ ಇಷ್ಟವಾಗುತ್ತಾರೆ. ಆಯ್ದಕ್ಕಿ ಮಾರಯ್ಯ, ಲಕ್ಕಮ್ಮ, ನಗೆಯ ಮಾರಿತಂದೆ, ನುಲಿಯ ಚಂದಯ್ಯ ಮೊದಲಾದ ಹಲವು ವಚನಕಾರರು 'ಕಾಯಕದಲ್ಲೇ ಕೈಲಾಸ' ಕಂಡ ಮಾರ್ಗ ನನಗೆ ಹೆಚ್ಚು ಪ್ರಿಯ ಮತ್ತು ಮಾದರಿ. ಇವರೇ ಶರಣ ಚಳವಳಿಯ ಬೇರುಗಳು ಮತ್ತು ಬೀಜಗಳು ಎಂದೆನಿಸುತ್ತದೆ. ಅವರೆನ್ನ ಪೂರ್ವಜರು.

**೯. ಹೆಣ್ಣು ಮತ್ತು ಆರ್ಥಿಕ ಸ್ವಾವಲಂಬನೆಯ ಹೊಳಹುಗಳನ್ನು ವಚನಕಾರ್ತಿಯರಲ್ಲಿ ಗುರುತಿಸಲು ಸಾಧ್ಯವಿದೆಯೇ?**

**ಉತ್ತರ:** ಸಾಧ್ಯವಿದೆ. ವಚನಕಾರ್ತಿಯರು ಹೆಣ್ತನವನ್ನು ನಿರಾಕರಿಸದೆ ಅದನ್ನು ಅನುಭವಿಸುತ್ತಲೇ ಮೀರಿ ಗಂಡಿನೊಂದಿಗೆ ಬೆರೆತು ಪರಸ್ಪರ ಬಯಲಾಗುತ್ತಾರೆ. ಸತಿ–ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎಂಬ ಜೀವನ ದರ್ಶನದಲ್ಲಿ ಎರಡು ಒಂದಾಗುವುದೇ ಸ್ವಾವಲಂಬನೆ ಎಂಬ ಹೊಳಹನ್ನು ಧ್ವನಿಸುತ್ತಾರೆ. ಎನ್ನ ದೇವಂಗೆ ಜಗವೆಲ್ಲ ಹೆಣ್ಣು ನೋಡಾ ಎಂಬುದು 'ಹೆಣ್ಣು' ಪರಿಕಲ್ಪನೆಯ ವಿಸ್ತರಣೆ. ವಚನಕಾರ್ತಿಯರಲ್ಲಿ ಬಹುತೇಕರು ಕುಶಲ ಕರ್ಮಿಗಳು. ಅಂದಿಗೂ ಇಂದಿಗೂ ಅವರು ಗಂಡನೊಂದಿಗೆ ದುಡಿಯದಿದ್ದರೆ, ಬದುಕು ನಡೆಯದು. ದುಗ್ಗಳೆಯ ತಂದು ಬದುಕಿದೆನು ಎನ್ನುವ ದಾಸಿಮಯ್ಯ. ಗಂಡನಿಗೆ ಬುದ್ಧಿ ಹೇಳುವ ಆಯ್ದಕ್ಕಿ ಲಕ್ಕಮ್ಮ ಆರ್ಥಿಕ ಸ್ವಾವಲಂಬನೆ ಗಂಡ ಹೆಂಡಿರನ್ನು ಬೇರೆ ಮಾಡುವಂಥದ್ದಲ್ಲ ಒಂದಾಗಿಸುವಂಥದ್ದು ಎಂಬ ಹೊರಹು ಇಲ್ಲಿದೆ.

**೧೦.ಸಹಿಷ್ಣುತೆಯನ್ನು ಶರಣ ಚಳುವಳಿಯ ಆಶಯ ಎಂದು ಹೇಳಲು ಸಾಧ್ಯವಿದೆಯೇ?**

**ಉತ್ತರ:** ಶಿವತ್ವವನ್ನು ಒಳಿತನ್ನು ಸಹಿಸುವ ಅಶಿವತ್ವವನ್ನು ಕೆಟ್ಟದ್ದನ್ನು ಶಿಕ್ಷಿಸುವ ಆ ಮೂಲಕ ಕೆಡುಕನ್ನು ಒಳಿತನ್ನಾಗಿಸುವ ಸಹಿಷ್ಣುತೆ ಶರಣ ಚಳವಳಿಯ ಆಶಯ. ಸಹಿಷ್ಣುತೆ ಎಂದರೆ ಅನ್ಯಾಯವನ್ನು ಅಧರ್ಮವನ್ನೂ ಸಹಿಸುವುದಲ್ಲ. ಅದನ್ನು ನ್ಯಾಯವನ್ನಾಗಿ, ಧರ್ಮವನ್ನಾಗಿ ಪರಿವರ್ತಿಸಲು ನಡೆಸುವ ಸ್ವೀಕಾರ, ಪ್ರೀತಿ ಮತ್ತು ಐಕ್ಯಗೊಳ್ಳುವುದು. ಸಹಿಷ್ಣುತೆ ಆದರೆ ಕೆಲವೊಮ್ಮೆ 'ಕೂಡಲ ಸಂಗಮ ದೇವನೆಂಬ ದಡಿಸಾಕು' ಎಂಬ ಬಸವಣ್ಣನವರ ಮಾತುಗಳು ಹಾಗೂ ಏಕಾಂತ ರಾಮಯ್ಯನ ಕ್ರಿಯೆಗಳು ಸಹಿಷ್ಣುತೆಯ ಆಶಯವನ್ನು ಕೆಲವರು ಕೆಲವೊಮ್ಮೆ ಕಳೆದುಕೊಂಡರೇ? ಎಂಬ ಅನುಮಾನವನ್ನೂ ಉಂಟುಮಾಡುತ್ತದೆ. ಇಂಥ ಕೆಲವೇ ಉದಾಹರಣೆಗಳಿಂದ ಶರಣ ಚಳವಳಿಯಲ್ಲಿ ಸಹಿಷ್ಣುತೆಯ ಆಶಯವಾಗಿ ಇರಲಿಲ್ಲ ಎಂದು ಹೇಳಲಾಗದು. ಅನ್ಯಾಯದ ವಿರುದ್ಧ ಕೆಲವೊಮ್ಮೆ ಅಸಹನೆಯೂ ಅಗತ್ಯ.



**೧೧. ವಚನಗಳ ಕಾವ್ಯ ಸೌಂದರ್ಯವನ್ನು ಕುರಿತು ಹೇಳಿ.**

**ಉತ್ತರ:** ವಚನಗಳ ಕಾವ್ಯ ಸೌಂದರ್ಯದಲ್ಲಿ ಸ್ವಭಾವೋಕ್ತಿ ಹಾಗೂ ಪ್ರೌಢೋಕ್ತಿ ಎರಡರ ಸಮ್ಮಿಲನವೂ ಇದೆ. ಅಕ್ಕಮಹಾದೇವಿಯರ ವಚನಗಳು ಇಂಪಾದ ಭಾವಗೀತೆಗಳಂತೆ ನಾದಮಾಧುರ್ಯಗಳಿಂದ ಪದಲಾಲಿತ್ಯದಿಂದ ಕಾವ್ಯ ಸೌಂದರ್ಯವನ್ನು ಹೆಚ್ಚಿಸಿಕೊಂಡಿವೆ. ಬಸವಣ್ಣನವರ ವಚನಗಳಲ್ಲಿ ಕಂಡುಬರುವ ಉಪಮೆ ಚಿತ್ತಕ ಶಕ್ತಿಗೆ ಅದರದೇ ಆದ ವಿಶಿಷ್ಟ ಸೊಬಗಿದೆ. ಅಲ್ಲಮ ಪ್ರಭುಗಳ ಬೆಡಗಿನ ವಚನಗಳ ಕಾವ್ಯಸೌಂದರ್ಯದ ವಿಸ್ಮಯವೂ ಭಿನ್ನ. ವಚನಗಳು ಕನ್ನಡತನದ ಪರಿಮಳದಿಂದ ಹೃದಯಸಂವಾದಿ ಕಾವ್ಯಸೌಂದರ್ಯವನ್ನು ಕನ್ನಡ ಸಾಹಿತ್ಯ ಚರಿತ್ರೆಗೆ ನೀಡಿವೆ. ಶಬ್ದಶಿಲ್ಪದಿಂದ ಹಿಡಿದು ಭಾವಶಿಲ್ಪ ಹಾಗೂ ಅನುಭಾವ ಶಿಲ್ಪದವರೆಗೆ ಕಾವ್ಯಸೌಂದರ್ಯದ ವಿಶಿಷ್ಟ ಆಯಾಮಗಳು ಇಲ್ಲಿವೆ.

**೧೨. ಶರಣ ಚಳುವಳಿಯಲ್ಲಿ ನಿಮಗೆ ಅತ್ಯಂತ ಪ್ರಿಯವಾದ ಅಂಶಗಳು ಯಾವುವು?**

**ಉತ್ತರ:** ಭಕ್ತಿ, ಕಾಯಕ, ದಾಸೋಹ, ಐಕ್ಯತೆಯ ಬಂಧುತ್ವ, ಅಕ್ಕ, ಅಣ್ಣ, ಸಂಬಂಧಗಳು ಸತಿಪತಿಭಾವ. ಶಿವಶಿವೆಯರಾಗುವ ಅನುಭಾವದ ಅನಿರ್ವಚನದ ಬಟ್ಟಬಯಲು ನನಗಿಷ್ಟವಾದ ಅಂಶಗಳು.

**೧೩. ವಚನಕಾರರನ್ನು ಮಾದರಿಯಾಗಿ ನೋಡುವುದರ ಬಗ್ಗೆ ನಿಮ್ಮ ಆಲೋಚನೆಗಳು.**

**ಉತ್ತರ:** ವಚನಕಾರರನ್ನು ವಚನಕಾರರ ಜೀವನಾನುಭವ ಮತ್ತು ಆಶಯದ ನೆಲೆಯಲ್ಲಿ ಮಾದರಿಯಾಗಿ ನೋಡಬೇಕು. ಅವರು ಹುಟ್ಟಿನ ಜಾತಿ, ಅಂತಸ್ತು, ವರ್ತಮಾನದ ಪ್ರಯೋಜನದ ಹಿನ್ನೆಲೆಯಲ್ಲಲ್ಲ. ವಚನಕಾರರನ್ನು ಮಾದರಿಯಾಗಿ ನೋಡುವುದು ನಾವು ಅವರಂತಾಗುವುದಕ್ಕಲ್ಲ. ನಾವು ನಮ್ಮಂತಾಗುವುದಕ್ಕೆ. ವಚನಕಾರರನ್ನು ಮಾದರಿಯಾಗಿ ನೋಡಬೇಕಾಗಿರುವುದು ಅವರ ಬದುಕಿನ ಸಾಧ್ಯತೆಗಳನ್ನು ಗ್ರಹಿಸಿ ನಮ್ಮ ಬದುಕಿನ ಸಾಧ್ಯತೆಗಳನ್ನಾಗಿಸುವುದಕ್ಕೆ.

ವಚನಕಾರರ ಕನ್ನಡತನ, ಅಧ್ಯಾತ್ಮದ ಅನುಭಾವ, ಕಾಯಕ ಪ್ರೀತಿ, ದಾಸೋಹ ಭಾವ, ಶಿವಪ್ರಜ್ಞೆ ನಮ್ಮ ಮಾದರಿಗಳಾದರೆ ನಮ್ಮ ವರ್ತಮಾನ ಹಸನಾದೀತು. "ಇವ ನಮ್ಮವ ಇವ ನಮ್ಮವ" ಎಂಬುದರಲ್ಲಿ "ನಮ್ಮವ" ಎಂಬ ಪದದ ಅರ್ಥ ನಿಷ್ಪನ್ನವು ಜಾತಿ, ಮತ, ಭಾಷೆ, ಪ್ರಾಂತ, ಲಿಂಗ, ಬಣ್ಣ, ಹಣ, ಇತ್ಯಾದಿ ಎಲ್ಲ ಎಲ್ಲ ತರತಮಗಳನ್ನು ಮೀರಿ ಜಗದಗಲ ಮುಗಿಲಗಲ ಮಿಗೆಯಗಲವಾಗಬಹುದಾದ ಕಾರಣಕ್ಕಾಗಿ ವಚನಕಾರರನ್ನು ಮಾದರಿಯಾಗಿ ನಮ್ಮ ನಮ್ಮ ಮನಕ್ಕೆ ಕನ್ನಡಿಯನ್ನಾಗಿಸಿಕೊಳ್ಳಬೇಕು. ಹೊರಗಿನ ಕನ್ನಡಿಯು ಕ್ರಮೇಣ ಕ್ರಮೇಣ ಒಳಗಿನ ಹಣತೆಯಾಗಿ ಅನುಭವವಾದರೆ ಜನ್ಮ ಸಾರ್ಥಕ. ಅದಕ್ಕಾಗಿ ನಾವು ವಚನಕಾರರನ್ನು ಮಾದರಿಯಾಗಿ ನೋಡಬೇಕು. ನೋಡುತ್ತ ನೋಡುತ್ತ ನಾವು ಅದೇ ಆಗಬೇಕೇ ಹೊರತು ವಚನಕಾರರನ್ನೂ ನಮ್ಮ ಮಟ್ಟಕ್ಕೆ ಇಳಿಸಬಾರದು. ಜ್ಯೋತಿಯ ಮುಟ್ಟಿದ ಬತ್ತಿಗಳೆಲ್ಲ ಜ್ಯೋತಿಯಾಗುವ, ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಾಗುವ ಬಗೆಯಂತೆ ವಚನಕಾರರನ್ನು ಮಾದರಿಯಾಗಿ ನೋಡುವ ಬಗೆಯಿರಬೇಕು ಎನ್ನಿಸುತ್ತದೆ. ಉಪನಿಷತ್ತಿನ ಪೂರ್ಣ, ವಚನಗಳ ಬಯಲು, ಕುವೆಂಪು ಅವರ ಅನಂತತೆ ವಚನ ಚಳವಳಯ ದಾರಿ.

# ವಚನ–ವೈಚಾರಿಕತೆ–ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

*ನಂ. 302/25, ಜೇನುಕಲ್ ಪ್ಯಾರಡೈಸ್, ಪೈಪ್‌ಲೈನ್ ರಸ್ತೆ*
*ಕರ್ನಾಟಕ ಲೇಔಟ್ 1ನೇ ಹಂತ,*

*ಬೆಂಗಳೂರು – 560 086 94810 35983*

ಇಂದು ಕನ್ನಡ ಸಾಹಿತ್ಯದ ಒಂದು ಪ್ರಮುಖ ಪ್ರಕಾರ ಎನಿಸಿರುವ "ವಚನ" ಸಾಹಿತ್ಯ ಹನ್ನೆರಡನೆಯ ಶತಮಾನದಲ್ಲಿ ಕೇವಲ ಸಾಹಿತ್ಯದ ಪ್ರಕಾರವಾಗಿರಲಿಲ್ಲ. ಅದು ನಿಜವಾಗಿಯೂ "ವಚನ" ಎಂದರೆ "ಭಾಷೆ" ಅಥವಾ ನಾವು ಇಂಗ್ಲಿಷನಲ್ಲಿ ಹೇಳುವ "ಪ್ರಾಮಿಸ್" ಆಗಿತ್ತು. ಹಾಗಾದರೆ ವಚನಗಳೆಲ್ಲವೂ ಕೇವಲ "ಭಾಷೆ" ಅಥವಾ "ಆಣೆ" ಗಳು ಮಾತ್ರವೇ ಎಂದರೆ ಅದೂ ಅಲ್ಲ. ಅವು ಅನುಭಾವದ ನುಡಿಗಳಾಗಿದ್ದವು. ನುಡೆದಂತೆ ನಡೆದ ಬದುಕಿನ ಬಗೆಯ "ಮಾತು" ಗಳಾಗಿದ್ದವು. ನಮ್ಮ ಇಂದಿನ ಆಧುನಿಕ ನಿಘಂಟುಗಳು, ಮಾತನ್ನು ಅರ್ಥವನ್ನು ಒಳಗೊಂಡ ಧ್ವನಿ ರೂಪದ ಅಭಿವ್ಯಕ್ತಿ ಎಂದರೆ, "ವಚನ"ಗಳು ಕೇವಲ ಅಷ್ಟು ಮಾತ್ರವಾಗಿರಲಿಲ್ಲ. ಅದನ್ನೂ ಮೀರಿದ ಸ್ಥಾನವನ್ನು ಶರಣರು ಮಾತುಗಳಿಗೆ ಕೊಟ್ಟಿದ್ದರು. ಈ ಭೂಮಿಯ ಮೇಲೆ ಜೀವ ಅಂಕುರಿಸಿ ವಿಕಾಸವಾಗುತ್ತ ಹೊರಟಾಗ ಮೊಟ್ಟ ಮೊದಲ ಬಾರಿಗೆ ಬಾಯಿಂದ ಶಬ್ದ ಹೊರಡಿಸಿದ ಜೀವಿಗಳು ಎಂದರೆ "ಕಪ್ಪೆಗಳು" ಅವುಗಳ ಧ್ವನಿಪೆಟ್ಟಿಗೆಯ ಮುಖಾಂತರ ಹೊರಡಿಸಿದ ಶಬ್ದ ಸಂಗಾತಿಯ ಹುಡುಕಾಟಕ್ಕಾಗಿ ಸೀಮಿತವಾಗಿತ್ತು. ಅದಾದ ನಂತರ, ಪಕ್ಷಿಗಳು ಹೊರಡಿಸಿದ "ಉಲಿ" ಬೇರೆ ಬೇರೆ ಸಂದರ್ಭಗಳಿಗೆ ಪ್ರಯೋಗವಾದರೂ ಸೀಮಿತವಾಗಿತ್ತು, ಸ್ತನಿಗಳು, ವಾನರಗಳು ಸಂವಹನಕ್ಕಾಗಿ ಶಬ್ದವನ್ನು ಹೊರಡಿಸಿದರೂ ಅಲ್ಲಿಯೂ ಬಳಕೆಯ ಹರಹಿಗೆ ಮಿತಿಯಿತ್ತು. ಆದರೆ ಮತಿವಂತ ಮಾನವನ ವಿಕಾಸದ ಜೊತೆ ಜೊತೆಗೇ ಅವನ ಭಾಷೆ ಬೆಳೆಯಿತು, ಧ್ವನಿ ರೂಪವನ್ನು ಪಡೆದು "ಮಾತು" ಆಯಿತು. ಇಲ್ಲಿ ಮಿತಿಯಿರಲಿಲ್ಲ. ಮಾತಿನಲ್ಲಿ ವರ್ಣಿಸಲು ಸಾಧ್ಯವಿಲ್ಲ ಎಂದರೂ ಸಹ ಅದನ್ನು ವಿವರಿಸುವ ಸಾಮರ್ಥ್ಯವನ್ನು ಈ "ಮಾತು" ಹೊಂದುತ್ತಾ ಬಂದಿತು. ವೈಜ್ಞಾನಿಕವಾಗಿ ವಿಚಾರ ಮಾಡಿ ನೋಡಿದಾಗ, ಇವೆಲ್ಲಕ್ಕಿಂತ ಮಿಗಿಲಾದ ಸ್ಥಾನವನ್ನು ಶರಣರು ಮಾತಿಗೆ ಕೊಟ್ಟಿದ್ದರು. ಇಂದು ಮಾತೇ ಎಲ್ಲವೂ ಆಗುತ್ತಿರುವಾಗ, ಕೇವಲ ಬಣ್ಣದ ಮಾತುಗಳಿಂದ ಜನರನ್ನು ಮರಳು ಮಾಡುವ, ಮೋಸ ಮಾಡುವ, ವಿಸ್ಮಯಗೊಳಿಸುವ ಪ್ರಯತ್ನಗಳನ್ನು ನಾವೆಲ್ಲರೂ ನೋಡುತ್ತಿದ್ದೇವೆ. ಮಾತಿನ ಹಿಂದಿನ ಪ್ರಾಮಾಣಿಕತೆ ಮರೆಯಾಗಿದೆ. ಇದು ಇಂದು ಸಮಾಜದಲ್ಲಿ ನಾವು ನೋಡುತ್ತಿರುವ ಕ್ಷೋಭೆಗಳಿಗೆ ಕಾರಣವಾಗುತ್ತಿದೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಶಿವಶರಣರ ಮಾತಿನ ಬಗೆಗಿನ ವಿಚಾರಗಳನ್ನು ಅರಿಯಲು ಮಾಡುವ ಪ್ರಯತ್ನ ಇದಾಗಿದೆ.



**ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದಡೆ**
**ಹಿಡಿದಿರ್ದ ಲಿಂಗವು ಘಟಸರ್ಪನಯ್ಯಾ.**
**ನುಡಿಯಲೂ ಬಾರದು, ನಡೆಯಲೂ ಬಾರದು,**
**ಲಿಂಗದೇವನೆ ದಿಬ್ಯವೊ ಅಯ್ಯಾ.**
**ಬಡವನ ಕೋಪವು ಅವುಡಿಗೆ ಮೃತ್ಯುವಾದಂತೆ**
**ಕಡೆಗೆ ದಾಂಟದು ಕಾಣಾ, ಕೂಡಲಸಂಗಮದೇವಾ.**

ಇಲ್ಲಿ ಬಸವಣ್ಣನವರು ನುಡಿ ನಡೆಗಳೊಂದಾಗಿರಬೇಕು, ಅಂತಹದಲ್ಲದ ಮಾತನ್ನು ಅಥವಾ ನುಡಿಯನ್ನು ನುಡಿದಾಗ, ಹಿಡಿದಿದ್ದ ಲಿಂಗವೂ ಕೂಡಾ, ಘಟಸರ್ಪವಾಗುತ್ತದೆ ಎನ್ನುತ್ತಾರೆ ಮಾತ್ರವಲ್ಲ ಅಂಥಹ ಮಾತಿನಿಂದಾಗುವ ಪರಿಣಾಮವನ್ನು ಇಲ್ಲಿ ವಿವರಿಸುತ್ತಾರೆ.

**ನುಡಿದಡೆ ಮುತ್ತಿನ ಹಾರದಂತಿರಬೇಕು.**
**ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು.**
**ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು.**
**ನುಡಿದಡೆ ಲಿಂಗ ಮೆಚ್ಚಿ ಅಹುದಹುದನಬೇಕು.**
**ನುಡಿಯೊಳಗಾಗಿ ನಡೆಯದಿದ್ದಡೆ,**
**ಕೂಡಲಸಂಗಮದೇವನೆಂತೊಲಿವನಯ್ಯಾ**

ಚಿರಪರಿಚಿತವಾದ ಈ ವಚನದಲ್ಲಿಯೂ ಸಹ ಬಸವಣ್ಣನವರು ಆ ದೇವನು ಮೆಚ್ಚುವಂತೆ ಮಾತಿರಬೇಕು ಎನ್ನುತ್ತಾರೆ. ಇದಕ್ಕೂ ಮುಂದೆ ಹೋದ ಅಲ್ಲಮ ಪ್ರಭುಗಳು "ಮಾತೆಂಬುದು ಜ್ಯೋತಿರ್ಲಿಂಗ" ಎಂದು ಮಾತನ್ನು ದೈವತ್ವಕ್ಕೆ ಸಮನಾಗಿಸುವುದನ್ನು ನಾವು ಈ ವಚನದಲ್ಲಿ ನೋಡಬಹುದು.

**ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದು ಪರತತ್ವ;**
**ತಾಳೋಷ್ಠಸಂಪುಟವೆಂಬುದು ನಾದಬಿಂದುಕಳಾತೀತ.**
**ಗುಹೇಶ್ವರನ ಶರಣರು**
**ನುಡಿದು ಸೂತಕಿಗಳಲ್ಲ ಕೇಳಾ ಮರುಳೆ.**

ಅಲ್ಲಮ ಪ್ರಭುಗಳ ಪ್ರಕಾರ, ಶಬ್ದ ಮತ್ತು ಅರ್ಥದ ಸಂಭಂದ ಕೇವಲ ಲೌಕಿಕ ನೆಲೆಯಲ್ಲಿನ ಸಂವಹನದ ಸ್ವರೂಪವಲ್ಲ. ಅವರು ಪದವೊಂದನ್ನು ಕೇವಲ ಅದರ ಅರ್ಥದಿಂದ ನೋಡುವುದಿಲ್ಲ. ಅವರ ಪ್ರಕಾರ ಅದು ಮಾತಾಗುವ ಹಂತದಲ್ಲಿ ಅದನ್ನು ಆಡಿದವನ ವ್ಯಕ್ತಿತ್ವವನ್ನು ತೋರಿಸುತ್ತದೆ. ಆದುದರಿಂದಲೇ ಅದು ಜ್ಯೋತಿರ್ಲಿಂಗ. ಅದು ಅರುಹಿನ ಬೆಳಕನ್ನು ಚೆಲ್ಲುವ ದೇವರು. ಆದುದರಿಂದ ಅನುಭವ ಮತ್ತು ಅಭಿವ್ಯಕ್ತಿಯನ್ನು ಒಟ್ಟಿಗೆ ಕ್ರಿಯೆಯಲ್ಲಿ ತರುವ ಸ್ಥಿತಿಯೇ ಮಾತು. ಇಡಿಯ ದೇಹವೇ ಲಿಂಗವಾಗಿರುವಾಗ, ನಾದ, ಬಿಂದು, ಕಳಾತೀತನ ಆವಾಸವಾಗಿರುವಾಗ ಮಾತು ಮೈಲಿಗೆಯಲ್ಲ. ಅವರದೇ ಇನ್ನೊಂದು ವಚನದಲ್ಲಿ ಪ್ರಭುಗಳು

**ಅಭ್ಯಾಸದ ಮಾತಲ್ಲ, ಶ್ರೋತ್ರದ ಸುಖವಲ್ಲ,**
**ಶಾಸ್ತ್ರದ ಅನುಭಾವದ ಮಾತಲ್ಲ.**
**ಒಳಗಣ ಮಾತಲ್ಲ ಹೊರಗಣ ಮಾತಲ್ಲ.**
**ಇದರಂಗ ವನರಿಯರೆ,**
**ಅನುಭಾವವ ಮಾಡಿ ಫಲವೇನಯ್ಯಾ?**
**ಗುಹೇಶ್ವರಲಿಂಗವು ಉಪಮಾತೀತ ನೋಡಯ್ಯಾ ಸಿದ್ಧರಾಮಯ್ಯ**

ಅಲ್ಲಮ ಪ್ರಭುಗಳಿಗೆ ಮಾತೆನ್ನುವುದು ಕೇವಲ ಶಬ್ದ ಪ್ರಯೋಗವಲ್ಲ. ಶರಣರ ಪ್ರಕಾರ ಆಧ್ಯಾತ್ಮದ ಸಾಧನೆ ಎನ್ನುವುದು ಈ ಲೋಕದಲ್ಲಿಯೇ ಇದ್ದು ಸಾಧಿಸಬೇಕಾದುದು ಅದ್ದರಿಂದ ಅಂಥವರಿಂದ ಬಂದ ಮಾತು ಸ್ವತಃ ದೇವರಾಗುತ್ತದೆ.

**ಶಬ್ದ ಸಂಭ್ರಮದಲ್ಲಿ ಹಿಂದುಗಾಣರು ಮುಂದುಗಾಣರು,**
**ತಮ್ಮ ತಾವರಿಯರು.**
**ಇದು ಕಾರಣ–ಮೂರು ಲೋಕವೆಲ್ಲವು,**
**ಬರುಸೂರೆವೋಯಿತ್ತು ಗುಹೇಶ್ವರಾ.**

ಬರಿದೇ ಮಾತು ಕೇವಲ ಶಬ್ದವೇ ಹೊರತು "ಮಾತ"ಲ್ಲ ಅವರ ಪ್ರಕಾರ ಅದು ಕೇವಲ ವಾದಕ್ಕಾಗಿ ಆಡಿದ ಅಹಂ ಪ್ರದರ್ಶನದ ಭಾಗವಲ್ಲದೇ ಮಹಾ ಘನವನ್ನು ಅರಿಯುವ ಬಗೆಯಲ್ಲ. ಅಂತಹ ಮಾತುಗಳನ್ನಾಡುವವರು ಸೃಷ್ಟಿ ಮಾಡುವುದು ಹಿಂದು ಮುಂದು ಗಾಣದ ಅತಂತ್ರದ ಸ್ಥಿತಿಯನ್ನು ಸೃಷ್ಟಿಸುತ್ತದೆ. ಇದನ್ನು ನೋಡಿದಾಗ " ಮಾತು" ವಿಕಾಸವಾಗಲು ಈ ಪ್ರಕೃತಿಯ ಪ್ರಯೋಗಶಾಲೆಯಲ್ಲಿ ನಡೆದ ಪ್ರಯೋಗಗಳ ಶ್ರಮ ಸಾರ್ಥಕವಾಯಿತು ಎನಿಸುತ್ತದೆ.

ಶರಣ ಆದಯ್ಯ ಮಾತು ಹೇಗಿದ್ದರೆ ಚೆನ್ನ ಎನ್ನುತ್ತಾ, ಕೋಪದಿಂದ ಬರುವ ಮಾತುಗಳನ್ನು ಶಾಂತಿಯಿಂದ ಪರಿಹರಿಸುವುದು ಜಾಣತನ. ತನಗೊಬ್ಬರು ಮುನಿದರೆಂದು, ಕೋಪದ ಮಾತುಗಳನ್ನು ಆಡಿದರೆಂದು ನಾವು ಅಂಥಹದೇ ಮಾತುಗಳನ್ನಾಡಬಾರದು ಎನ್ನುತ್ತಾ ತಮ್ಮ ವಚನದಲ್ಲಿ ಹೀಗೆ ನುಡಿಯುತ್ತಾರೆ.

**ತನಗೊಬ್ಬರು ಮುನಿದರು ತಾನಾರಿಗೂ ಮುನಿಯಲಾಗದು.**
**ಮನೆಯ ಕಿಚ್ಚು ಮೊದಲೊಮ್ಮೆ ಮನೆಯ ಸುಡುವಂತೆ**
**ತನ್ನ ಕೋಪ ತನ್ನನೆ ಸುಡುವುದು ನೋಡಯ್ಯ.**
**ಸವಿಮಾತುಗಳು ಬೇಗದಿಂದ ಆ ಕ್ರೋಧವ [ಗೆಲಿದಿರ್ಪುದು]**
**ಸಾಕ್ಷಿ: ಸಶ್ರುತಃ ಸಾತ್ವಿಕೋ ವಿದ್ವಾನ್ ಸ ತಪಸ್ವೀ ಜಿತೇಂದ್ರಿಯಃ**
**ಯೇನ ಶಾಂತೇನ ಖಡ್ಗೇನ ಕ್ರೋಧಶತ್ರುರ್ನಿಪಾದಿತಃ ಇಂತೆಂದುದಾಗಿ**
**ಆ ಕ್ರೋಧ ದುರ್ಜನರ ಗೆಲುವುದು.**
**ಇಂತೀ ಸೋತುದಕ್ಕೆ ಸೋತವರ ಕೂಡೆ**
**ಎತ್ತಣ ವಿರೋಧವಯ್ಯ?**
**ಸೌರಾಷ್ಟ್ರ ಸೋಮೇಶ್ವರನ ಶರಣರು**
**ಸಚರಾಚರಪ್ರಾಣಿಗಳಲ್ಲಿ ವಿರೋಧವಿಲ್ಲದಿರಬೇಕು.**

ಸಿಟ್ಟಿನಿಂದ ಬರುವ ಮಾತುಗಳು ಮೊದಲು ನಮ್ಮನ್ನು ಕೊಲ್ಲುತ್ತವೆ ಎನ್ನುತ್ತಾ ಸಕಲ



ಚರಾಚರ ಜೀವಿಗಳಲ್ಲಿ ನಮ್ಮ ಮಾತು ಶಾಂತರೀತಿಯಿಂದಿರಬೇಕು ಎನ್ನುತ್ತಾರೆ. ನಗೆಯ ಮಾರಿತಂದೆಯ ಈ ವಚನವನ್ನು ನೋಡಿದರೆ ಶರಣರು ಮಾತಿಗೇಕೆ ಅಷ್ಟೊಂದು ಮಹತ್ವವನ್ನು ಕೊಟ್ಟಿದ್ದರು ಎನ್ನುವುದರ ಅರಿವಾಗುತ್ತದೆ.

**ಬಲ್ಲವನ ನುಡಿ ಸರ್ವವೆಲ್ಲಕ್ಕೂ ನನ್ನಿ.**
**ಬೆಲ್ಲದ ಘಟ್ಟಿ ಸರ್ವವೆಲ್ಲಕ್ಕೂ ಮಧುರ.**
**ಕಳವಿಲ್ಲದವನ ನುಡಿ ಸರ್ವವೆಲ್ಲಕ್ಕೂ ದಿಟ.**
**ಹುಸಿ ಒಂದಕ್ಕೆ ದಿಟವೆರಡಕ್ಕೆ ಸಂದೇಹ ಮೂರಕ್ಕೆ ಬೀಡು.**
**ಮೂಕೊರೆಗನ ಶುದ್ಧಿಯೇತಕ್ಕೆ?**
**ಆತುರವೈರಿ ಮಾರೇಶ್ವರಾ.**

ಇಲ್ಲಿ ಬಲ್ಲವನೆಂದರೆ ಬರಿದೇ ಮಾತುಬಲ್ಲವನಲ್ಲ, ಅರಿವಿನ ಬೆಳಗ ಬಲ್ಲವನ ಮಾತು! ಅವರದೇ ಮತ್ತೊಂದು ವಚನದಲ್ಲಿ

**ಮಾತು ಬ್ರಹ್ಮಾಂಡವ ಮುಟ್ಟಿ,**
**ನೀತಿ ಮಾತಿನ ಬಾಗಿಲ ಕಾಯ್ವುದು, ಅದೇತರ ಮಾತು?**
**ಆತುರವೈರಿ ಮಾರೇಶ್ವರಾ.**

ಇಂತಹ ಹಲವಾರು ವಚನಗಳು ನಮಗೆ ದೊರೆಯುತ್ತವೆ. ಮಾತು ಅಂದು ಅದೆಂತಹ ಮಹತ್ತನ್ನು ಪಡೆದಿತ್ತು! ಎನ್ನುವುದರ ಅರಿವು ನಮಗಾಗುತ್ತದೆ. ಇಂದು ನಾವು ಕಾಣುವ ಮಾತಿನ ಕೂಟಗಳು, ಅಲ್ಲಿ ಕೇಳುವ ಮಾತಿನ ಚಪಲಕ್ಕೆ ಮಾತ್ರ ಆಡುವ ಮಾತುಗಳು, ಮನುಷ್ಯ ಜೀವಿಯ ಅತ್ಯಂತ ಬೆಲೆಯುಳ್ಳ ಶಕ್ತಿಯಾದ ಮಾತನ್ನು ಯಾವ ಮಟ್ಟಕ್ಕೆ ಇಳಿಸಿವೆ ಎನ್ನುವುದರ ಅರಿವು ನಮಗಾಗುತ್ತದೆ. ನಯವಾದ, ಮನಸ್ಸಿಗೆ ಮುಟ್ಟುವ, ಅರ್ಥಭರಿತವಾದ ಮಾತು ಮಾತ್ರ ಕೇಳುವವನ ಮನಸ್ಸನ್ನು ತಟ್ಟುತ್ತದೆ, ಲಿಂಗವೂ ಅಹುದಹುದೆನ್ನುವಂತೆ ಮಾಡುತ್ತದೆ. ಮಿತವಾದ ಹಿತವಾದ ಮಾತು ಒಂದು ಶಕ್ತಿಯಾಗಬಲ್ಲದೇ ಹೊರತು ಬರಿಯ ವಾದದ ಮಾತು ಮರುಕ್ಷಣವೇ ಮರೆತು ಹೋಗುತ್ತದೆ.

**ಭಾವಕ್ಕೆ ಇಂಬಿಲ್ಲ ಶಬ್ದ ಮೀಸಲು ನೋಡಾ.**
**ನುಡಿಗೆ ಎಡೆಯಿಲ್ಲ ಎಡೆಗೆ ಕಡೆಯಿಲ್ಲ,**
**ಗುಹೇಶ್ವರನೆಂಬ ಶಬ್ದ ವೇದಿಸಲೊಡನೆ**

ಈ ವಚನದಲ್ಲಿ ಪ್ರಭುಗಳು ಶಬ್ದದ ಮೀಸಲನ್ನು ಒಡೆದು ಅದರ ಭಾವ ಮೈದೆರೆಯುತ್ತದೆ. ಶಬ್ದವೆಂದರೆ ಕೇವಲ ಕಿವಿಗೆ ಕೇಳುವ ಧ್ವನಿ ಮಾತ್ರವಲ್ಲ. ಅದು ಕೊಡುವ ಭಾವ. ಅನುಭವದಿಂದ ಹುಟ್ಟುವ ನುಡಿ ಶಬ್ದವನ್ನೊಡೆದು ಬರುವಾಗ ಅರಿವಿನ ಜಗತ್ತಿನ ಬೆಳಗನ್ನು ತೋರುವ ಜ್ಯೋತಿರ್ಲಿಂಗವಾಗುತ್ತದೆ.

ನಮ್ಮದೇ ಕಾಲದಲ್ಲಿ ಬದುಕಿ ಹೋದ ಅದ್ಭುತ ಮೇಧಾವಿ ಸ್ಟೀಫನ್ ಹಾಕಿಂಗ್ ನಿಗೆ ಅಳವಡಿಸಿದ್ದ ಕೃತಕ ಧ್ವನಿ ಪೆಟ್ಟಿಗೆಯಿಂದ ಹೊರಡುತ್ತಿದ್ದ ಯಾಂತ್ರಿಕ ಧವನಿಯನ್ನು ಕೇಳಲು ಸಹಸ್ರಾರು ಜನ ನೆರೆಯುತ್ತಿದ್ದರು. ಅದು ಕೇವಲ ಅವನ ಮಾತು ಕೇಳಲು ಅಲ್ಲ. ಅಲ್ಲಿದ್ದ ವಿಚಾರಗಳನ್ನು ತಿಳಿದು ತಮ್ಮ ಜ್ಞಾನದ ಪರಿಧಿಯನ್ನು ವಿಸ್ತರಿಸಿಕೊಳ್ಳಲು. ಇವನ್ನೆಲ್ಲಾ ನೋಡಿದಾಗ ೧೨ನೆಯ ಶತಮಾನದ ಶರಣರ ವೈಚಾರಿಕತೆಯ ನೆಲೆಯ ಆಳ ಅದೆಷ್ಟು ಘನವಾದುದು ಎಂದು ಅಚ್ಚರಿಯಾಗದೇ ಇರುವುದಿಲ್ಲ.!

# ಭಾರತ ಸ್ವಾತಂತ್ರ್ಯ ಹೋರಾಟ ಅಹಿಂಸಾತ್ಮಕವೆ?

**ಗೊ.ರು. ಚನ್ನಬಸಪ್ಪ**

*೪೦೬, 'ಪ್ರಣಾಮ' ೩ನೇ ಕ್ರಾಸ್,' ಎಫ್ ರಸ್ತೆ*
*ಐಡಿಯಲ್ ಹೋಮ್ಸ್ ಟೌನ್‌ಶಿಪ್, ೨ನೇ ಹಂತ*
*ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦ ೦೯೮*
*೯೯೮೦೫೧೨೩೪೯*

ಭಾರತದ ಸ್ವಾತಂತ್ರ್ಯ ಹೋರಾಟ ಅಹಿಂಸಾತ್ಮಕವಾದುದೆಂದು ಜಗತ್ಪ್ರಸಿದ್ಧವಾಗಿದೆ. ಈ ಹೋರಾಟಕ್ಕೆ ಸುಮಾರು ೧೯೦ ವರ್ಷಗಳ ಇತಿಹಾಸವಿದೆ. ಇದು ಅಹಿಂಸಾತ್ಮಕವೆನಿಸಲು ಹೋರಾಟದ ನಾಯಕತ್ವ ವಹಿಸಿದ ಮಹಾತ್ಮಗಾಂಧೀಜಿ ಅವರು ಬ್ರಿಟಿಷ್ ಆಡಳಿತದ ವಿರುದ್ಧ ಸಾರಿದ ಅಸಹಕಾರ, ಸತ್ಯಾಗ್ರಹ, ಶಾಂತಿಯಾತ್ರೆ ಮೊದಲಾದ ಅಹಿಂಸಾ ಮಾರ್ಗಗಳನ್ನು ಅನುಸರಿಸಿದ್ದು ಕಾರಣವೆನ್ನಬಹುದಾದರೂ, ಆ ಹೋರಾಟದ ಅವಧಿಯಲ್ಲಿ ಹಿಂಸಾತ್ಮಕ ಘಟನೆಗಳೂ ನಡೆದಿವೆ.

ಈ ಬಗೆಗೆ ಪ್ರಸಿದ್ಧ ಇಂಗ್ಲಿಷ್ ಸಾಪ್ತಾಹಿಕ 'ದಿ ವೀಕ್' ಪತ್ರಿಕೆಯಲ್ಲಿ (೨೨.೮.೨೦೨೧) ರಾಷ್ಟ್ರದ ಹಿರಿಯ ಅಂಕಣಕಾರ ಶ್ರೀ ಆರ್. ಪ್ರಸನ್ನನ್ ಅವರು ಒಂದು ವಸ್ತುನಿಷ್ಠಲೇಖನವನ್ನು ಬರೆದಿದ್ದಾರೆ. ವಿದೇಶಿ ಆಡಳಿತದ ವಿರುದ್ಧ ಭಾರತದ ನಾನಾ ಭಾಗಗಳಲ್ಲಿ ನಡೆದಿರುವ ಪ್ರತಿಭಟನೆ, ದಂಗೆ, ಬಂಡಾಯಗಳ ರೂಪದ ಪ್ರಮುಖ ಘಟನೆಗಳನ್ನು ದಾಖಲಿಸಿದ್ದಾರೆ. ೧೭೨೧ರಿಂದ ೧೯೪೭ರವರೆಗೆ ನಡೆದ ಅಂತಹ ಹಿಂಸಾತ್ಮಕ ಘಟನೆಗಳ ಒಂದು ಪಟ್ಟಿಯನ್ನೇ ಕೊಟ್ಟಿದ್ದಾರೆ. ಆ ಪಟ್ಟಿಯಲ್ಲಿ ಭಾರತದ ನಾನಾ ಭಾಗಗಳಲ್ಲಿ ಬ್ರಿಟಿಷ್ ಆಡಳಿತದ ಸೈನಿಕರು ಮತ್ತು ಪೋಲಿಸರೊಡನೆ ಸ್ಥಳೀಯ ದೇಶಾಭಿಮಾನಿಗಳು ನಡೆಸಿದ ಕಾದಾಟಗಳು ಸೇರಿಲ್ಲವೆಂದು ಹೇಳಿದ್ದಾರೆ. ಉದಾಹರಣೆಗೆ ಹೇಳುವುದಾದರೆ, ನಮ್ಮ ಕರ್ನಾಟಕದಲ್ಲೇ ನಡೆದ ವಿದುರಾಶ್ವತ್ಥ, ಈಸೂರು ಘಟನೆಗಳಂತೆ ದೇಶದಾದ್ಯಂತ ಸಹಸ್ರಾರು ಸಂಖ್ಯೆಯ ಘಟನೆಗಳು ನಡೆದಿವೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅಂತಹ ಹೋರಾಟಗಳೆಲ್ಲ ಆಯಾ ಪ್ರಾದೇಶಿಕ ಸ್ವಾತಂತ್ರ್ಯ ಹೋರಾಟ ಚರಿತ್ರೆಗಳಲ್ಲಿ ದಾಖಲಾಗಿವೆ. ಈ ಎಲ್ಲ ಹೋರಾಟಗಳಲ್ಲೂ ಲಕ್ಷಾಂತರ ಸಂಖ್ಯೆಯ ಜನ ನೋವು ಅನುಭವಿಸಿದ್ದಾರೆ; ಸಾವಿಗೆ ತುತ್ತಾಗಿದ್ದಾರೆ; ಸೆರೆಮನೆ ಸೇರಿದ್ದಾರೆ; ಆಸ್ತಿ-ಪಾಸ್ತಿ ಕಳೆದುಕೊಂಡಿದ್ದಾರೆ. ಅವರ ತ್ಯಾಗ ಮತ್ತು ಬಲಿದಾನಗಳು ಸ್ವತಂತ್ರ ಭಾರತದ ಇಂದಿನ ನಿರ್ಮಾಪಕರಿಗೆ ಎಚ್ಚರದ ಪಂಜಾಗಬೇಕಾಗಿದೆ.

ಸ್ವಾತಂತ್ರ್ಯ ಹೋರಾಟದ ಮೂಲ ಉದ್ದೇಶ ಪರಕೀಯ ಆಡಳಿತದ ಬಂಧನದಿಂದ ದೇಶವನ್ನು ಮುಕ್ತಗೊಳಿಸುವುದಾಗಿತ್ತಾದರೂ, ಅದರ ಪರಮ ಗುರಿ ಸ್ವಾಭಿಮಾನದ,



ಸ್ವಸಾಮರ್ಥ್ಯದ, ಸ್ವಾವಲಂಬನೆಯ, ಸರ್ವಸಮಾನತೆಯ, ಪರಸ್ಪರ ಸೌಹಾರ್ದದ ಸಮೃದ್ಧ ಭಾರತದ ನಿರ್ಮಾಣವಾಗಿತ್ತು ಎಂಬುದನ್ನು ಇಂದಿನ ತಲೆಮಾರು ಎಂದಿಗೂ ಮರೆಯಬಾರದು.

ಕಳೆದ ೭೪ ವರ್ಷಗಳಿಂದ ನಾವು ಜಗತ್ತಿನಲ್ಲೇ ಅತ್ಯಂತ ಬೃಹತ್ತಾದ ಸ್ವತಂತ್ರ ಪ್ರಜಾಪ್ರಭುತ್ವದ ಪ್ರಜೆಗಳಾಗಿ ಇದ್ದೇವೆ. ಇದು ಸಹಜವಾಗಿ ಅಭಿಮಾನದ ಸಂಗತಿ. ಆದರೆ ನಮ್ಮ ಹಿರಿಯರು ಗಳಿಸಿಕೊಟ್ಟ ಸ್ವಾತಂತ್ರ್ಯವನ್ನು ನಾವು ಎಷ್ಟರಮಟ್ಟಿಗೆ ರಾಷ್ಟ್ರನಿರ್ಮಾಣಕ್ಕಾಗಿ ಬಳಸಿಕೊಂಡಿದ್ದೇವೆ? ಎಷ್ಟರಮಟ್ಟಿಗೆ ಸ್ವಾವಲಂಬನೆ-ಸಮ ಸಮಾನತೆಗಳನ್ನು ಸಾಧಿಸಿದ್ದೇವೆ? ಎಷ್ಟರಮಟ್ಟಿಗೆ ಪರಸ್ಪರ ಸೌಹಾರ್ದದಿಂದ ನಡೆದುಕೊಳ್ಳುತ್ತಿದ್ದೇವೆ? ಇಷ್ಟು ವರ್ಷಗಳಾದರೂ ನಾವು ಹಿಂದಿಗಿಂತ ಹೆಚ್ಚಿನ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿಕೊಂಡಿರುವುದೇಕೆ? ನಮ್ಮದೇ ಸಂವಿಧಾನದ ಪ್ರಕಾರ ನಾವೇ ಆರಿಸುತ್ತಿರುವ ಜನಪ್ರತಿನಿಧಿಗಳೇ ಆಳುತ್ತಿರುವ ಇಂದಿನ ವ್ಯವಸ್ಥೆಯಲ್ಲೂ ಅಧಿಕಾರದ ಕಿತ್ತಾಟ, ಭ್ರಷ್ಟಾಚಾರ, ಅತ್ಯಾಚಾರ, ಅಪಹರಣ, ಸಾಮಾಜಿಕ ಅಸಮಾನತೆ, ಅಸ್ಪೃಶ್ಯತೆ, ರಾಜಕೀಯ ಪಕ್ಷಗಳ ಸ್ವಜನ ಪಕ್ಷಪಾತ, ಅಧಿಕಾರ ದುರುಪಯೋಗ, ದುರ್ಬಲ ವರ್ಗದ ಶೋಷಣೆ – ಇತ್ಯಾದಿ ಅನಿಷ್ಟಗಳು ಅಬ್ಬರಿಸುತ್ತಿರುವುದೇಕೆ? ಇವೆಲ್ಲವುಗಳ ಬಗೆಗೆ ನಾವು ಆತ್ಮನಿರೀಕ್ಷೆ ಮಾಡಿಕೊಳ್ಳಬೇಕಾದ ತುರ್ತು ಅಗತ್ಯವಿದೆ.

ಸ್ವಾತಂತ್ರ್ಯ ಹೋರಾಟಗಾರರು ಬ್ರಿಟಿಷರ ಅನ್ಯಾಯದ ವಿರುದ್ಧ ಹೋರಾಡಿದಂತೆ, ಇಂದಿನ ನಾವೂ, ನಮ್ಮವರೇ ಆದರೂ, ಅವರು ನಡೆಸುತ್ತಿರುವ ಅನ್ಯಾಯಗಳ ವಿರುದ್ಧ ಪ್ರಜಾಸತ್ತಾತ್ಮಕವಾಗಿ ಹೋರಾಡಬೇಕಾಗಿದೆ. ಸ್ವರಾಜ್ಯ ಸಾಧನೆಗೆ ನಮ್ಮ ಹಿರಿಯರು ಮಾಡಿದ ತ್ಯಾಗ ಬಲಿದಾನಗಳಂತೆ, ಸ್ವರಾಜ್ಯದ ನೆಮ್ಮದಿಗಾಗಿ ನಾವೂ ಸಿದ್ಧರಾಗಿರಬೇಕಾಗಿದೆ. ಸಲ್ಲದ ವಿಷಯಗಳಿಗಾಗಿ ಕ್ಷುಲ್ಲಕ ಹೋರಾಟ ನಡೆಸಲು ಜನರನ್ನು ಎತ್ತಿಕಟ್ಟುವ ಮತ್ತು ರಾಷ್ಟ್ರದ ಘನತೆ-ಗೌರವಗಳಿಗೆ ಧಕ್ಕೆಯುಂಟುಮಾಡುವ ಪಿತ್ತಗೆಟ್ಟ ಪ್ರವೃತ್ತಿ ನಿಲ್ಲಬೇಕು. ಸಲ್ಲುವ ವಿಷಯಗಳಿಗಾಗಿ ಎಲ್ಲರೂ ಕೈ ಜೋಡಿಸಿ ದುಡಿಯುವಂತಾಗಬೇಕು. ಅಂತಹ ದೃಢ ಸಂಕಲ್ಪವಾದರೆ, ಸ್ವಾತಂತ್ರ್ಯದ 'ಅಮೃತ ಮಹೋತ್ಸವ' ಚಿರಸ್ಮರಣೀಯವಾಗುತ್ತದೆ.

ನಾನು ಆರಂಭದಲ್ಲಿ ಪ್ರಸ್ತಾಪಿಸಿದ, ಸ್ವಾತಂತ್ರ್ಯ ಹೋರಾಟದ ಇತಿಹಾಸಕ್ಕೆ ಸಂಬಂಧಿಸಿದಂತೆ ಶ್ರೀ ಆರ್. ಪ್ರಸನ್ನನ್ ಅವರು ಉಲ್ಲೇಖಿಸಿರುವ ಘಟನೆಗಳನ್ನು ನಮ್ಮ 'ಮಹಾಮನೆ'ಯ ಓದುಗರೂ ಗಮನಿಸುವಂತಾಗಲೆಂದು ಆ ಘಟನೆಗಳ ಪಟ್ಟಿಯನ್ನೇ ಮುಂದೆ ಕೊಡಲಾಗಿದೆ.

## *ಸ್ವಾತಂತ್ರ್ಯ ಹೋರಾಟದ ಪ್ರಮುಖ ಪ್ರತಿಭಟನೆಗಳು, ಬಂಡಾಯಗಳು ಮತ್ತು ದಂಗೆಗಳು*

೧೭೨೧ : ಅತ್ತಿಂಗಳ ದಂಗೆ; ಅಂಚುತೆಂಗು ಕೋಟೆಯ ರಕ್ಷಣಾ ದಳಪತಿ ಮತ್ತು ೧೩೦ ಇಂಗ್ಲಿಷರನ್ನು ಸ್ಥಳೀಯರು ಗಲ್ಲಿಗೇರಿಸಿದುದು.

೧೭೬೦-೧೮೦೦ : ಬಂಗಾಳದಲ್ಲಿ ಈಸ್ಟ್ ಇಂಡಿಯಾ ಕಂಪನಿಯು ವಿಧಿಸಿದ್ದ ತೆರಿಗೆ ವಿರುದ್ಧದ ಸನ್ಯಾಸಿ ಪ್ರತಿಭಟನೆ.

೧೭೬೪ : ಪಾಟ್ನಾದಲ್ಲಿ ಮೊದಲ ಸಿಪಾಯಿ ದಂಗೆ; ಬಕ್ಸಾರ್ ಯುದ್ಧವಿಜೇತ ಹೆಕ್ಟರ್ ಮನ್ರೋನಿಂದ ದಮನ.

೧೭೬೫ : ಬರ್ಮಾಕ್ಕೆ ಸಮುದ್ರಯಾನ ಮಾಡಲು ನೀಡಿದ ಆಜ್ಞೆಯ ವಿರುದ್ಧ ಬಂಗಾಳದ ಸೈನ್ಯದ ದಂಗೆ; ಬಾಂಬು ತೋಪಿನಿಂದ ನಾಯಕರಾದ ರಘುನಾಥ ಸಿಂಗ್ ಮತ್ತು ಉಮ್ರಾಗಿರ್ ಸಿಂಗ್ ಅವರ ಹತ್ಯೆ.

೧೭೮೦-೧೮೦೫ : ವಿಜಯನಗರಮ್ ರಾಜನ ಬಂಡಾಯ; ತಮಿಳು ದೇಶದಲ್ಲಿ ಪಾಲಿಗಾರ ಪ್ರತಿಭಟನೆ; ಉತ್ತರ ಮಲಬಾರಿನಲ್ಲಿ ಪಳ್ಹಾಸ್ಸಿ ದಂಗೆ.

೧೮೦೬ : ವೆಲ್ಲೂರು ದಂಗೆ; ಗೂರ್ಖಾಯುದ್ಧ ಪ್ರಸಿದ್ಧ ರಾಬರ್ಟ್ ರೊಲ್ಲೊ ಗಿಲೆಪ್ಸಿಯಿಂದ ದಮನ; ೫೦೦ ಜನ ದಂಗೆಕೋರರ ವಧೆ.

೧೮೦೮-೦೯ : ತಿರುವಾಂಕೂರು ಮತ್ತು ಕೊಚ್ಚಿನ್‌ಗಳಲ್ಲಿ ದಿವಾನ ವೇಲು ಥಂಪಿಯಿಂದ ಪ್ರಚೋದಿತ ಜನಾಂದೋಲನ.

೧೮೨೪ : ಸಮುದ್ರಯಾನದ ಆದೇಶದ ವಿರುದ್ಧ ಭರತ್‌ಪುರದಲ್ಲಿದ್ದ ಭಾರತೀಯ ದಳಗಳ ದಂಗೆ; ಕಿತ್ತೂರು ರಾಣಿ ಚೆನ್ನಮ್ಮನ ನಾಯಕತ್ವದಲ್ಲಿ ಬಂಡಾಯ.

೧೮೫೫ : ಬಂಗಾಳದಲ್ಲಿ ಜಮೀನುದಾರರ ವಿರುದ್ಧ ಮರ್ಮ ಸೋದರರಾದ ಸಿದ್ದು, ಕಾನ್ಹು, ಚಾಂದ್ ಮತ್ತು ಭೈರವ್ ನಾಯಕತ್ವದ ಸಂತಾಲ್ ದಂಗೆ.

೧೮೫೭ : ಇತಿಹಾಸ ಪ್ರಸಿದ್ಧ ಸಿಪಾಯಿ ದಂಗೆ ಮತ್ತು ಅದು ಸ್ಫೂರ್ತಿ ನೀಡಿದ ಚಳವಳಿ; ಅದನ್ನು ಹತ್ತಿಕ್ಕಲು ಬ್ರಿಟಿಷ್ ಸರ್ಕಾರ ಕಾರ್ಯಾಚರಣೆಯಿಂದಾಗಿ ಉಭಯ ಪಕ್ಷದಿಂದಲೂ ಭಾರಿ ಹಿಂಸಾಚಾರ.

೧೮೫೯ : ಬಂಗಾಳದಲ್ಲಿ ನೀಲಿ ಬೆಳೆಯ ಬ್ರಿಟಿಷ್ ರೈತರ ವಿರುದ್ಧ ದೇಶಿ ನೀಲಿ ಬೆಳೆಗಾರರ ದಂಗೆ; ಕ್ಷಿಪ್ರಗತಿಯಲ್ಲಿ ದಮನ.

೧೮೭೨ : ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ ವೈಸ್‌ರಾಯ್ ಲಾರ್ಡ್ ಮೇಯೋ ಕೊಲೆ.

೧೮೭೯ : ಪುಣೆ ಮತ್ತು ನೆರೆಹೊರೆಯ ಪ್ರದೇಶಗಳಲ್ಲಿ ವಾಸುದೇವ ಬಲವಂತ್ ಫಡಕೆಯಿಂದ ಸಶಸ್ತ್ರ ದಂಗೆ ಸಂಘಟನೆ; ಶೀಘ್ರ ದಮನ; ಸೆರೆಮನೆಯಲ್ಲಿ ಫಡಕೆ ಸಾವು.

೧೮೯೧ : ಮಣಿಪುರದ ಸೇನಾಪತಿ ಬರೇಂದ್ರಜಿತ್ ಮತ್ತು ಅವನ ಸೋದರರಿಂದ ಬ್ರಿಟಿಷ್ ಅಧಿಕಾರಿಯ ಶಿರಚ್ಛೇದನ; ಮೂರು ಜನರ ಸೆರೆಹಿಡಿದು ಸಾರ್ವಜನಿಕವಾಗಿ ನೇಣು ಹಾಕಿದುದು.

೧೮೯೭ : ಪುಣೆಯಲ್ಲಿ ಪ್ಲೇಗ್ ಕಮಿಷನರ್ ಚಾರ್ಲ್ಸ್ ರ್‍ಯಾಂಡ್‌ನನ್ನು ದಾಮೋದರ್ ಹರಿ ಚಾಪೇಕರ್ ಗುಂಡಿಟ್ಟು ಕೊಂದುದು; ಅವನನ್ನು ಮತ್ತು ಅವನ ಸೋದರರನ್ನು ನೇಣು ಹಾಕಿ ಸಾಯಿಸಿದುದು.

೧೯೦೮ : ಮಝಫರ್‌ಪುರದಲ್ಲಿ ನ್ಯಾಯಾಧೀಶನನ್ನು ಕೊಲ್ಲಲು ಖುದೀರಾಮ್ ಬೋಸ್ ಮತ್ತು ಪ್ರಫುಲ ಚಾಕಿ ಅವರು ಬಾಂಬೆ ಎಸೆದುದು; ಇಬ್ಬರು ಬ್ರಿಟಿಷ್ ಮಹಿಳೆಯರ ಸಾವು; ಬೋಸ್‌ನಿಗೆ ನೇಣು ಶಿಕ್ಷೆ; ಚಾಕಿ ಆತ್ಮಹತ್ಯೆ; ಮಾಣಿಕ್ ತೋಳಾ ಬಾಂಬ್ ಪ್ರಕರಣದಲ್ಲಿ ಶ್ರೀ ಅರವಿಂದರ ಬಂಧನ.



೧೯೧೨ : ದೆಹಲಿಯ ನೂತನ ರಾಜಧಾನಿಗೆ ಪ್ರವೇಶಿಸುವಾಗ ವೈಸ್‌ರಾಯ್ ಲಾರ್ಡ್ ಹಾರ್ಡಿಂಗ್ಸ್ ಮೇಲೆ ಬಾಂಬ್ ದಾಳಿ.

೧೯೧೪ : ಬಡ್ಜ್‌ಬಡ್ಜ್‌ನಲ್ಲಿ ಫಾದರ್ ಚಳವಳಿಗಾರರ ಸಾವು; ಹರಿದಾಸ ದತ್ತನಾಯಕತ್ವದ ಬಂಗಾಳಿ ಕ್ರಾಂತಿಕಾರರಿಂದ ಪಿಸ್ತೂಲು ಮತ್ತು ಮದ್ದುಗುಂಡುಗಳ ಅಪಹರಣ.

೧೯೧೫ : ಬಂಗಾಳದಲ್ಲಿ ಬಾಘಾ ಜತಿನ್‌ನಿಂದ ಬಂಡಾಯ ಯೋಜನೆ; ಗುಂಡಿಟ್ಟು ಅವನ ಸಾವು; ಸೈನ್ಯದಲ್ಲೇ ಬಂಡಾಯವನ್ನು ಯೋಜಿಸಿದ್ದ ವಿಷ್ಣುಗೋಪಾಲ ಪಿಂಗ್ಗೆಗೆ ನೇಣುಶಿಕ್ಷೆ.

೧೯೧೯ : ಜಲಿಯನ್ ವಾಲಾ ಬಾಘ್ ಸಾಮೂಹಿಕ ಹತ್ಯೆ; ಪ್ರತ್ಯಕ್ಷದರ್ಶಿ ಯುವಕ ಉಧಾಮ್‌ಸಿಂಗ್‌ನಿಂದ, ಆ ಹತ್ಯೆಗೆ ಆದೇಶ ನೀಡಿದ್ದ ಮೊಬೈಲ್ ಓ. ಡ್ವಯರ್‌ನ ಅಪಹರಣ ಮತ್ತು ಹತ್ಯೆ.

೧೯೨೧-೨೨ : ಹಿಂದು ಜಮೀನ್ದಾರರು ಮತ್ತು ಬ್ರಿಟಿಷ್ ಆಡಳಿತದ ವಿರುದ್ಧ ಮಲಬಾರಿನಲ್ಲಿ ಮಾಪಳ್ಳಾದಂಗೆ; ಔರಿ ಔರಾದ ಊಟಿ ಮತ್ತು ಅಗ್ನಿಸ್ಪರ್ಶಗಳು

೧೯೨೫ : ಕರೋರಿ ರೈಲು ನಿಲ್ದಾಣದ ಬಳಿ ಒಂದು ಅಂಚೆ ವಾಹನದಿಂದ ಹಿಂದೂಸ್ಥಾನ್ ಸೋಷಿಯಲಿಸ್ಟ್ ರಿಪಬ್ಲಿಕನ್ ಸಂಘದ ಸದಸ್ಯರಿಂದ ಹಣದ ಲೂಟಿ.

೧೯೨೮-೨೯ : ಭಗತ್‌ಸಿಂಗ್ ಬ್ರಿಟಿಷ್ ಅಧಿಕಾರಿಯೊಬ್ಬನನ್ನು ಗುಂಡಿಟ್ಟು ಕೊಂದುದು; ಕಲ್ಕತ್ತಾದಿಂದ ದೆಹಲಿಗೆ ವೈಸ್‌ರಾಯ್ ಲಾರ್ಡ್ ಇರ್ವಿನ್ ಪ್ರಯಾಣ ಮಾಡುತ್ತಿದ್ದ ರೈಲಿನ ಮೇಲೆ ಬಾಂಬ್ ದಾಳಿ.

೧೯೩೦ : ಸೂರ್ಯಸೇನ್ ಯಾ ಮಸ್ಟೆರ್ಡಾನ ನಾಯಕತ್ವದ ಸುಮಾರು ೫೦ ಜನ ಬಂಡಾಯಗಾರರಿಂದ ಚಿತ್ತಗಾಂಗ್ ಶಸ್ತ್ರಾಗಾರದ ಮೇಲೆ ದಾಳಿ; ದಾಳಿಕಾರರ ಬೇಟೆಯಾಡಿದ ನಂತರ ೧೨ ಜನರನ್ನು ಗುಂಡಿಟ್ಟು ಕೊಂದುದು.

೧೯೩೧ : ಕೊಮಿಲ್ಲಾದ ಜಿಲ್ಲಾಧಿಕಾರಿ ಸಿ.ಜಿ.ಬ. ಸ್ಟೈವನ್ಸ್‌ನನ್ನು ಇಳಾ ಸೇನ್ ಮತ್ತು ಮೀರಾದೇವಿ ಎಂಬ ಶಾಲಾ ಬಾಲಕಿಯರು ಗುಂಡಿಟ್ಟು ಕೊಂದುದು; ಅವರು ಕಿರಿಯ ವಯಸ್ಸಿನವರೆಂಬ ಕಾರಣದಿಂದ ಮರಣ ದಂಡನೆಗೆ ಬದಲಾಗಿ ಜೀವಮಾನ ಪರ್ಯಂತ ಕಾರಾಗೃಹ ಶಿಕ್ಷೆ ವಿಧಿಸಿದುದು.

೧೯೩೨ : ಚಿತ್ತಗಾಂಗ್‌ನ ಯೂರೋಪಿಯನ್ ಕ್ಲಬ್ ಮೇಲೆ ಪ್ರೀತಿಲತಾ ಮಡ್ಡೇದರ್‌ಳ ಸಶಸ್ತ್ರ ದಾಳಿ: ನಂತರ ಆಕೆಯ ಆತ್ಮಹತ್ಯೆ.

೧೯೪೬ : ಬಾಂಬೆಯಲ್ಲಿ ರಾಯಲ್ ಇಂಡಿಯನ್ ನೌಕಾ ಪಡೆಯಲ್ಲಿ ಸ್ಫೋಟ; ಒಂದು ವಾರ ಕಾಲ ದಂಗೆ; ಕರಾಚಿ ಮತ್ತಿತರ ಸ್ಥಳಗಳಿಗೆ ದಂಗೆಯ ವಿಸ್ತರಣೆ.

ವಿ.ಸೂ. ಮೇಲ್ಕಂಡ ಘಟನೆಗಳಲ್ಲಿ ಸರ್ಕಾರಿ ಸೈನ್ಯಗಳೊಡನೆ ನಡೆದಿರುವ ಪ್ರಾದೇಶಿಕ ಕಾದಾಟಗಳು ಸೇರಿಲ್ಲ.

(ಕೃಪೆ: 'ದೀ ವೀಕ್', ೨೨ ಆಗಸ್ಟ್ ೨೦೨೧)

# ಕ್ಷೇತ್ರ ವಾರ್ತೆಗಳು

## ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ವಿವಿಧ ಜಿಲ್ಲೆಗಳಲ್ಲಿ, ತಾಲ್ಲೂಕುಗಳಲ್ಲಿ ನಡೆದ "ಸಂಸ್ಥಾಪಕರ ದಿನಾಚರಣೆ"ಯ ಭಾವಚಿತ್ರಗಳು, ದಿನಾಂಕ: ೨೯.೮.೨೦೨೧



ಇಂಡಿ ತಾಲೂಕು: ಲಿಂ. ಸಂಗಮ್ಮ ಬಶೆಟ್ಟೆಪ್ಪ ಸುರಪುರ ದತ್ತಿ ಉಪನ್ಯಾಸ, ವೇದಿಕೆಯಲ್ಲಿ: ಐ.ಬಿ. ಸುರಪುರ, ಗಂಗಾ ಗಲಗಲಿ, ಶೈಲಜಾ ತೆಲ್ಲೂರ, ಎ.ಸಿ. ಪಾಟೀಲ, ಎಂ.ಪಿ. ಭೈರಜಿ, ದೇವೇಂದ್ರ, ಎಸ್.ಎಸ್.ಸ್ವಾಮಿ



ಬಸವನ ಬಾಗೇವಾಡಿ ತಾಲೂಕು: ಲಿಂ. ನಾಗಪ್ಪ ಗುರಪ್ಪ ಮರ್ತುರ ದತ್ತಿ, ವೇದಿಕೆಯಲ್ಲಿ: ಎಸ್.ಎಸ್. ಝುಳಕಿ, ವೀರೇಶ ಕುಂಟೋಜಿ, ಹೆಚ್.ಎಸ್. ಬಿರಾದಾರ, ವೀರಣ್ಣ ಮರ್ತುರ, ಆರ್.ಜಿ. ಅಳ್ಳಗಿ, ಎಸ್.ಐ. ಮುನಗಳಿ, ಸಾವಿತ್ರಿ ಪಟ್ಟಣಶೆಟ್ಟಿ, ಛಾಯಾ ಪವಾರ



ಸುರಪುರ ತಾಲೂಕು:
ವೇದಿಕೆಯಲ್ಲಿ: ಶಾಂತಪ್ಪ ಬೂದಿಹಾಳ, ಶರಣಗೌಡ ಪಾಟೀಲ್ ಜೈನಾಪೂರ, ಪ್ರಕಾಶ್ ಎಸ್. ಅಂಗಡಿ, ವೀರೇಶ ಹಳಿಮನಿ, ಶಿವರಾಜ ಕಲಿಕೇರಿ



ಮುದ್ದೇಬಿಹಾಳ ತಾಲೂಕು: ರೆವರೆಂಡ್ ಉತ್ತಂಗಿ ಚೆನ್ನಪ್ಪ ಮತ್ತು ಲಿಂ. ಶ್ರೀಮತಿ ಲಿಂಗಮ್ಮ ಪೋಲೀಸ ಪಾಟೀಲ ದತ್ತಿ
ವೇದಿಕೆಯಲ್ಲಿ: ಬಾಬುಲಾಲ ಒಸ್ವಾಲ, ಬಾಹುಬಲಿ ಗೋಗಿ, ಬಸವರಾಜ ನಾಲತವಾಡ, ಕಾಶಿಬಾಯಿ ರಾಮಪೂರ, ಬೋರಮ್ಮಾ ರಾಂಪೂರ, ವಿರುಪಾಕ್ಷಪ್ಪ, ಮಹಾವೀರ ಸಗರಿ, ಎಸ್.ಬಿ. ಬಂಗಾರಿ, ಮಹಾಂತಪ್ಪ ನಾವದಗಿ





ಬಾದಾಮಿ: ಲಿಂ. ಶ್ರೀಮತಿ ಅಮರವ್ವ ಬಸಪ್ಪ ಜಾಬಶೆಟ್ಟಿ ದತ್ತಿ, ವೇದಿಕೆಯಲ್ಲಿ: ಡಾ. ಶಿಲಾಕಾಂತ ಪತ್ತಾರ, ಶಶಿಧರ ಮೂಲಿಮನಿ, ಉಮಾದೇವಿ ಈ. ಪಟ್ಟಣಶೆಟ್ಟಿ, ಜಯಶ್ರೀ ಆಲೂರ, ಸಂತೋಷ ಪಟ್ಟಣಶೆಟ್ಟಿ, ಪಿ.ಡಿ. ವಾಲೀಕಾರ, ಕುಮಾರ ಅಂಗಡಿ, ಸಿದ್ದು ಪಟ್ಟ




ಶಿವಮೊಗ್ಗ: ಲಿಂ. ಶರಣೆ ಸಂಗಮ್ಮ ಶರಣ ಪಟೇಲ್ ಮಹಾಲಿಂಗಪ್ಪಗೌಡ್ರು, ಜಿ.ಬಿ. ಶಶಿಧರ ಸ್ಮರಣಾರ್ಥ ದತ್ತಿ, ವೇದಿಕೆಯಲ್ಲಿ: ಭೋಜರಾಜ್ ಹೆಚ್.ಜಿ. ಪರಮೇಶ್ವರಪ್ಪ ಎನ್., ಆರ್.ಎಸ್. ಸ್ವಾಮಿ, ಡಾ. ಶ್ರೀ ಬಸವ ಮರುಳಸಿದ್ಧಸ್ವಾಮಿ, ಎಸ್. ರುದ್ರೇಗೌಡರು, ಡಾ.ಬಿ.ಜಿ. ಧನಂಜಯ್, ಹೆಚ್.ಎನ್. ಮಹಾರುದ್ರ



ಭದ್ರಾವತಿ ತಾಲೂಕು: ಬನ್ನಿಹಟ್ಟಿ ಹಾಲಪ್ಪ ಮಹಾದೇವಪ್ಪ ದತ್ತಿ,
ವೇದಿಕೆಯಲ್ಲಿ: ಡಾ. ವೀಣಾ ಎಸ್. ಭಟ್, ಎಂ. ವಿರೂಪಾಕ್ಷಪ್ಪ, ಡಾ.ಹೆಚ್.ಕೆ. ಕಲ್ಪನಾ, ಜಗದೀಶ್ ಕವಿ, ಕತ್ತಲಗೆರೆ ತಿಮ್ಮಪ್ಪ, ಶಂಕರ್, ಮಲ್ಲಿಕಾಂಬ ವಿರೂಪಾಕ್ಷಪ್ಪ, ಹೇಮಾವತಿ



ಹೊಸನಗರ ತಾಲೂಕು:
ಶರಣೆ ಶ್ರೀಮತಿ ದಾನಮ್ಮ ಶ್ರೀ ಬೊಮ್ಮನಾಯ್ಕರು, ಸೊನಲೆ ದತ್ತಿ
ವೇದಿಕೆಯಲ್ಲಿ:
ಡಾ. ಸೊನಲೆ ಶ್ರೀನಿವಾಸ, ಮಳಲಿ ಮಠದ ಶ್ರೀಗಳು, ಡಿ.ವಿ. ರೇವಣಪ್ಪಗೌಡ, ದೇವೇಂದ್ರಪ್ಪಗೌಡ, ಗಂಗಾಧರಯ್ಯ ಚಂದ್ರು, ಈಶ್ವರಗೌಡ



ಸೊರಬ ತಾಲೂಕು:
ಲಿಂ. ಹೇಮಲತಮ್ಮ ಉಳವಿ ದತ್ತಿ,
ವೇದಿಕೆಯಲ್ಲಿ: ಶ್ರೀ ಮ.ನಿ.ಪ್ರ ಡಾ.
ಮಹಾಂತಸ್ವಾಮಿಗಳು,
ಎಸ್. ಕೃಷ್ಣಾನಂದ,
ಮೃತ್ಯುಂಜಯಪ್ಪಗೌಡ,
ಅಶೋಕನಾಯಕ್,
ಮಹಾಂತೇಶ್ ಕಳ್ಳಿಕೊನೆ,
ಗುರುಮೂರ್ತಿ, ಸುನಂದ,
ಪ್ರವೀರ್ಣ ಭಂಡಾರಿ



ಸಾಗರ ತಾಲೂಕು: ಲಿಂ. ಸಿದ್ದಪ್ಪ
ಮಹಾದೇವಪ್ಪ ಕೋಡೇರ್ ದತ್ತಿ
ಮತ್ತು ಲಿಂ. ಆರ್. ಜಯಮ್ಮ
ಶಿವಮಾದೇಗೌಡ ದತ್ತಿ,
ವೇದಿಕೆಯಲ್ಲಿ: ಡಾ. ಬಸವರಾಜ
ಸಂಗಮ, ಶಶಿಧರ ಬಿ.ಸಿ.,
ಸಾ.ಕೆ. ಸುರೇಶ್, ಕೊಟ್ರೇಶ್
ಯು.ಎಂ., ದಿನೇಶ್, ಬರದವಳ್ಳಿ,
ಜಂಬಿಗೆ ವೀರಭದ್ರಪ್ಪ, ಗುರುಪ್ರಸಾದ್,
ಸಿ.ಹೆಚ್. ಕಾವ್ಯ ಸಿ.ಜಿ.



ಸಕಲೇಶಪುರ ತಾಲೂಕು:
ರಾಗಿ ಬೊಮ್ಮನಹಳ್ಳಿ
ಲಿಂ. ಚನ್ನಬಸಪ್ಪದತ್ತಿ,
ವೇದಿಕೆಯಲ್ಲಿ: ರತ್ನಮ್ಮ ಚನ್ನಬಸಪ್ಪ,
ಮಂಜುನಾಥ್, ಬಿ.ಡಿ. ಬಸವಣ್ಣ,
ಬಿ.ಆರ್. ಗುರುದೇವ್,
ನಂದಿನಿ ವಿಶ್ವನಾಥ್



ಅರಸೀಕೆರೆ ತಾಲೂಕು:
ವೇದಿಕೆಯಲ್ಲಿ: ಶೇಖರ್ ಸಂಕೋಡ್ನಳ್ಳಿ,
ಪುರುಷೋತ್ತಮ್,
ಕಟ್ಟಾಯ ಶಿವಕುಮಾರ್,
ಪಿ. ಶಾಂತಕುಮಾರ್, ರಾಮಚಂದ್ರ,
ಹೆಚ್.ಬಿ. ಸತೀಶ್





ಕಾರ್ಕಳ ತಾಲೂಕು:
ಡಾ. ವೃಷಭೇಂದ್ರ ಸ್ವಾಮಿ ಮತ್ತು ಪ್ರೊ. ಲಲಿತಾಂಬ ದತ್ತಿ,
ವೇದಿಕೆಯಲ್ಲಿ: ಯಶೋದಮ್ಮ, ಮಂಜುಳಾ,
ಹೇಮಾವತಿ, ಸಾವಿತ್ರಮ್ಮ



ಬೈಂದೂರು ತಾಲೂಕು: ಶಿವಲಿಂಗಯ್ಯ, ಪ್ರದೀಪ್, ಗಿರಿಜಮ್ಮ, ಭಾಗೀರಥಮ್ಮ



ಬ್ರಹ್ಮಾವರ ತಾಲೂಕು:
ಲಿಂ. ಲಕ್ಷ್ಮೀ ಸೋಮಬಂಗೇರ ದತ್ತಿ,
ವೇದಿಕೆಯಲ್ಲಿ: ಚಂದ್ರಶೇಖರಯ್ಯ,
ಈಶಕುಮಾರ್, ಶ್ರೀಕರಿ ಪ್ರಕಾಶ್, ಸುಜಯ



ಹೆಬ್ರಿ ತಾಲೂಕು: ಸುತ್ತೂರು ಜಗದ್ಗುರು
ಶ್ರೀ ಸಿದ್ಧನಂಜ ದೇಶಿಕೇಂದ್ರರ ದತ್ತಿ,
ವೇದಿಕೆಯಲ್ಲಿ: ರಾಜಯ್ಯ, ಅಕ್ಷಯ,
ಶ್ರೀಕಾಂತ, ಭವಾನಿಯಮ್ಮ




ಉಡುಪಿ ತಾಲೂಕು:
ಗೆಜ್ಜೆಗೊಂಡನಹಳ್ಳಿ ಗಂಗಮ್ಮ ಮತ್ತು
ಮಕ್ಕಳು ದತ್ತಿ
ವೇದಿಕೆಯಲ್ಲಿ: ದಯಾನಾಥ್,
ಶಿವಪ್ರಕಾಶ್, ಶಿವಕುಮಾರ್,
ರತ್ನಾವತಿ



ಕಾಪು ತಾಲೂಕು:
ವೇದಿಕೆಯಲ್ಲಿ: ಗಿರೀಶ್ ಪಾಂಗಳ,
ಮಹೇಶ್‌ಕುಮಾರ್, ಭವಾನಿಯಮ್ಮ,
ಪ್ರೊ. ದಿವ್ಯಶ್ರೀ ಗಿರೀಶ್



ಉಡುಪಿ ತಾಲೂಕು ಕದಳಿ
ಮಹಿಳಾ ವೇದಿಕೆ



ಹುಮನಾಬಾದ ತಾಲೂಕು:
ಸುತ್ತೂರು ಜಗದ್ಗುರು ಶ್ರೀ ಸಿದ್ಧನಂಜ
ದೇಶಿಕೇಂದ್ರ ಮಹಾಸ್ವಾಮಿಗಳು ದತ್ತಿ,
ವೇದಿಕೆಯಲ್ಲಿ: ಫಾಳೆಪ್ಪನಿ., ಸುರೇಖಾ
ಪಾಟೀಲ, ಬಸವಶ್ರೀ ಪಾಟೀಲ





ರಾಮಸಂದ್ರ ತಾಲೂಕು:



ಶ್ರೀನಿವಾಸಪುರ ತಾಲೂಕು:



ಕೆ.ಜಿ.ಎಫ್. ತಾಲೂಕು:



ಮಾಲೂರು ತಾಲೂಕು:
ವೇದಿಕೆಯಲ್ಲಿ: ಎಸ್.ಎಚ್. ಮಹೇಶ್ವರಪ್ಪ,
ಎನ್.ಆರ್. ಜ್ಞಾನಮೂರ್ತಿ, ಗೌರಿಶಂಕರ್,
ಬಿ. ಶಿವಶಂಕರ್, ಮುನೀರಾ



ಬಸವನ ಬಾಗೇವಾಡಿ: ಕೊಟ್ಲಿ ದಂಪತಿಗಳ ದತ್ತಿ, ದಿ:೨೦.೦೯.೨೦೨೧
ವೇದಿಕೆಯಲ್ಲಿ: ವಿ.ಸಿ. ನಾಗಠಾಣ, ಶ್ರೀ ಷ.ಬ್ರ ಶಿವಪ್ರಕಾಶ ಶಿವಾಚಾರ್ಯರು, ಜಂಬುನಾಥ ಕಂಚ್ಯಾಣಿ, ಸುರೇಶಗೌಡ ಪಾಟೀಲ, ಎಸ್.ಕೆ. ಸೋಮನಕಟ್ಟೆ ಸದಾಶಿವ ಕೊಟ್ಲಿ, ವೀರಣ್ಣ ಮರ್ತೂರ, ಎಸ್.ಐ. ಮುನಗುಳಿ, ಸಾವಿತ್ರಿ ಪಟ್ಟಣಶೆಟ್ಟಿ



ಬಳ್ಳಾರಿ: ಅಚ್ಚಪ್ಪ ಸೋಮಪ್ಪ ಹಂಪಮ್ಮ ದತ್ತಿ ಉಪನ್ಯಾಸ, ದಿನಾಂಕ:೧೬.೯.೨೦೨೧
ಚಿತ್ರದಲ್ಲಿ: ಜಿ.ಆರ್. ನಾಗರಾಜ, ಡಾ. ಎ.ಐ. ಬಸವರಾಜ ರೆಡ್ಡಿ, ಡಾ. ವಿ.ಎಸ್. ವೀರಣ್ಣ, ಕೆ.ಬಿ. ಸಿದ್ಧಲಿಂಗಪ್ಪ, ಅಚ್ಚಪ್ಪ ನಾಗರಾಜ



ಸಂಡೂರು: ಶ್ರೀಮತಿ ಸರೋಜಮ್ಮ ಶ್ರೀ ತಾಮ್ರಪರ್ಣಿ ವೆಂಕೋಬಾಚಾರ್ ದತ್ತಿ ಉಪನ್ಯಾಸ, ದಿನಾಂಕ:೮.೯.೨೦೨೧
ತಾಮ್ರಪರ್ಣಿ ಪಾರ್ಥಸಾರಥಿ, ಬಸವರಾಜ ಬಣಕಾರ, ಬಿ.ಎಂ. ಮಹಾಂತೇಶ್ ಕಕುಮಾರ, ಸಂದೀಪ್‌ಕುಮಾರ್, ಎಚ್. ಕುಮಾರಸ್ವಾಮಿ, ಎಂ.ಎಂ. ಶಿವಮೂರ್ತಿ ಸ್ವಾಮಿ



# ಆಯುರ್ವೇದ ಪದ್ಧತಿ ಬಳಸಿ ರೋಗ ನಿರೋಧಕ ಶಕ್ತಿ ಹೆಚ್ಚಿಸಿ




## ರೋಗನಿರೋಧಕ ಶಕ್ತಿ ಹೆಚ್ಚಿಸುವ ಆಯುಷ್ ಕ್ವಾಥ / ಜೋಶಾಂದಾ / ಅಶ್ವಗಂಧ / ಅಸ್ಗಂದ್ (ಕಷಾಯ)

**ಕ್ವಾಥ / ಜೋಶಾಂದಾ (ಕಷಾಯ)ದ ಪುಡಿ ತಯಾರಿಸಲು ಬೇಕಾಗುವ ಸಾಮಗ್ರಿಗಳು:**

| | | |
|---|---|---|
| ತುಳಸಿ (ಒಣಗಿಸಿದ ತುಳಸಿ) ಎಲೆ | - | 4 ಭಾಗ |
| ದಾಲ್ಚಿನ್ನಿ | - | 2 ಭಾಗ |
| ಒಣಶುಂಠಿ | - | 2 ಭಾಗ |
| ಕರಿಮೆಣಸು | - | 1 ಭಾಗ |

**ತಯಾರಿಸುವ ವಿಧಾನ :** ಮೇಲಿನ 4 ನಾಲ್ಕು ಪದಾರ್ಥಗಳನ್ನು ಚೆನ್ನಾಗಿ ಪುಡಿಮಾಡಿ ಗಾಜಿನ ಬಾಟಲಿಯಲ್ಲಿ ಶೇಖರಿಸಿಟ್ಟುಕೊಳ್ಳುವುದು.

**ಉಪಯೋಗಿಸುವ ವಿಧಾನ :** 1/4 ಚಮಚ ಕಷಾಯದ ಪುಡಿಯನ್ನು 150 ಮಿಲಿ ನೀರಿನಲ್ಲಿ 5 ರಿಂದ 10 ನಿಮಿಷ ಕುದಿಸಿ ಸೋಸಿ ದಿನಕ್ಕೆ 1 ಬಾರಿ ಕುಡಿಯುವುದು. (ಅಗತ್ಯವಿದ್ದಲ್ಲಿ, ಬೆಲ್ಲ, ಲಿಂಬೆರಸ ಅಥವಾ ಒಣದ್ರಾಕ್ಷಿ ಬೆರಸುವುದು)



## ಅಶ್ವಗಂಧ / ಅಸ್ಗಂದ್ (ಕಷಾಯ)

**ಉಪಯೋಗಿಸುವ ವಿಧಾನ:**
1/2 ಚಹ ಚಮಚ ಅಶ್ವಗಂಧ ಪುಡಿಯನ್ನು ಜೇನುತುಪ್ಪ ಅಥವಾ ಬಿಸಿ ಹಾಲಿನೊಂದಿಗೆ ದಿನಕ್ಕೆ ಒಂದು ಬಾರಿ ಸೇವಿಸುವುದು.



## ಅರ್ಕ್-ಎ-ಅಜೀಬ್

2-3 ಹನಿಗಳನ್ನು ಟಿಷ್ಯು ಪೇಪರ್ ಅಥವಾ ಕರವಸ್ತ್ರಕ್ಕೆ ಹಾಕಿ ಆಗಾಗ ವಾಸನೆಯನ್ನು ತೆಗೆದುಕೊಳ್ಳುವುದು. ಕುಡಿಯುವ ನೀರಿಗೆ 2 ಹನಿ ಹಾಕಿ, ಅವಿ ತೆಗೆದುಕೊಳ್ಳುವುದು.







ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ








## ಹೊಸ ಸರ್ಕಾರದ ಶುಭಾರಂಭ

# ರೈತರ, ಬಡವರ, ದೀನದಲಿತರ, ಮಹಿಳೆಯರ

## ಕಲ್ಯಾಣಕ್ಕೆ ದಿಟ್ಟ ಹೆಜ್ಜೆ

## ಸ್ವರಾಜ್ಯ ದಿಂದ ಸುರಾಜ್ಯ




ರೈತರ ಮಕ್ಕಳಿಗೆ ನೂತನ **ವಿದ್ಯಾರ್ಥಿ ವೇತನ** ಕಿರಿಷ್ಠ ₹ 2,500/- ರಿಂದ ಗರಿಷ್ಠ ₹ 11,000/-. ಈ ಯೋಜನೆಗೆ ₹ 1,000 ಕೋಟಿ ಮೀಸಲು. ಅಂದಾಜು 17 ಲಕ್ಷ ಫಲಾನುಭವಿಗಳು.




**"ಸಂಧ್ಯಾ ಸುರಕ್ಷಾ"** ವೃದ್ಧಾಪ್ಯ ವೇತನ ₹ 1,000/- ರಿಂದ ₹ 1,200/-ಕ್ಕೆ ಏರಿಕೆ. 35.98 ಲಕ್ಷ ಫಲಾನುಭವಿಗಳು.
**"ವಿಧವಾ ವೇತನ"** ₹ 600/- ರಿಂದ ₹ 800/-ಕ್ಕೆ ಹೆಚ್ಚಳ. 17.25 ಲಕ್ಷ ಫಲಾನುಭವಿಗಳು.



**ವಿಶೇಷ ಚೇತನರಿಗೆ ಬೆಂಬಲ** ವಿಶೇಷ ಚೇತನರ ಮಾಸಿಕ ವೇತನ ₹ 600/- ರಿಂದ ₹ 800/-ಕ್ಕೆ ಏರಿಕೆ. 3.66 ಲಕ್ಷ ಫಲಾನುಭವಿಗಳು.




ಎಸ್.ಟಿ.ಪಿ. ಯೋಜನೆಗಳ ಪರಿಣಾಮಕಾರಿ ಅನುಷ್ಠಾನಕ್ಕೆ ಪ್ರತ್ಯೇಕ **"ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವಾಲಯ"** ಸ್ಥಾಪನೆ. ರಾಜ್ಯದಲ್ಲಿನ ಪರಿಶಿಷ್ಟ ಪಂಗಡ ಸಮುದಾಯದ ಅಂದಾಜು 50 ಲಕ್ಷ ಜನರಿಗೆ ಅನುಕೂಲ.




ಆಯವ್ಯಯದಲ್ಲಿ ಘೋಷಿಸಿದಂತೆ ಮುಖ್ಯಮಂತ್ರಿಗಳ ಮೇಲ್ವಿಚಾರಣೆಯಲ್ಲಿ **"ಮಹಿಳೆಯರ ರಕ್ಷಣೆ ಮತ್ತು ಸಬಲೀಕರಣ ಯೋಜನೆ"**ಗಳ ಅನುಷ್ಠಾನ.

ಕರ್ನಾಟಕ ವಾರ್ತೆ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

## "ಸಂಸ್ಥಾಪಕರ ದಿನಾಚರಣೆ" ದಿನಾಂಕ: ೨೯.೮.೨೦೨೧

ಚಾಮರಾಜನಗರ ಜಿಲ್ಲೆ: ವೇದಿಕೆಯಲ್ಲಿ: ಶ್ರೀ ಇಮ್ಮಡಿ ಮುರುಘರಾಜೇಂದ್ರ ಸ್ವಾಮೀಜಿ, ಡಿ. ಬಸಪ್ಪ, ವಿ. ಮಲ್ಲಿಕಾರ್ಜುನಸ್ವಾಮಿ ದುಗ್ಗಟ್ಟಿ, ಬಿ.ಕೆ. ರವಿಕುಮಾರ್, ಕೆ.ಪಿ. ಸದಾಶಿವಮೂರ್ತಿ ಯು.ಆರ್. ಲಿಂಗರಾಜೇ ಅರಸ್, ಎನ್. ಶಿವಪ್ರಸಾದ್

ರಾಯಚೂರು ಜಿಲ್ಲೆ:
ವೇದಿಕೆಯಲ್ಲಿ: ನಾಗರಾಜ ಮಸ್ಕಿ, ಸಿದ್ಧಲಿಂಗಮ್ಮ ಪಿ., ಲಲಿತಾ ಎಂ, ದಾನಮ್ಮ

ಹುಣಸೂರು ತಾಲೂಕು

ನಂಜನಗೂಡು ತಾಲೂಕು

ಹೆಗ್ಗಡದೇವನಕೋಟೆ ತಾಲೂಕು

Magazine Registration No. RNI 68294/97
"REGISTERED" Postal Registration No. RNP/KA/BGS/167/2021-2023
Licensed to post without Pre Payment, License No:- PMG/BG/WPP/119/2021-2023
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine Total Pages 68 (Include Cover Pages) Date of Publication 1 October 2021



ಹಾನಗಲ್ ತಾಲೂಕು:
ಸಂಸ್ಥಾಪಕರ ದಿನಾಚರಣೆ
ವೇದಿಕೆಯಲ್ಲಿ:
ಶ್ರೀ ಶಿವಬಸವ ಮಹಾಸ್ವಾಮಿಗಳು
ಎಸ್.ಸಿ. ಕಲ್ಲನಗೌಡ್ರ
ಅಕ್ಕನ ಬಳಗದ ಶರಣೆಯರು



81 ಶ್ರೀ ವೀರಣ್ಣ ಬಸಟ್ಟೆಪ್ಪ ಹಲಕುರ್ಕಿ
ಕಾಂಬಳೆಗಲ್ಲಿ
ಮು:ಪೋ:ಬಾಗಲಕೋಟೆ
ಬಾಗಲಕೋಟೆ-587 101

APMC Yard
Novanagar
587103

Published by: Go.Ru. Channabasappa, Akhila Bharatha Sharana Sahitya Parishat (Regd.)
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at : Sathyasri Printers Pvt Ltd., No. 16/1, 3rd Cross, 2nd Main Road,
Kasturiba Nagar, Bengaluru - 560 026

Editor : Dr. M.S. Ashadevi